# ಅಪರಂಜಿ

## ತಿಳಿನಗೆಯ ಕಾರಂಜಿ

### ಜನ್ಮ ದಿನೋತ್ಸವ ಸಂಚಿಕೆ

□ ಆನಂದ್ □ ಶಿವು □ ಎಂ.ವಿ.ಸೀ □ ಅ.ರಾ.ಸೆ.

□ ಜಿ.ಎಸ್.ಜಿ. □ ಶಿಲಾಬಾಲಕ □ ಚಂದ್ರು

□ ನಳಿನೀಪ್ರಿಯ □ ಲೀಲಾ ಮಿರ್ಲೆ □ ಬಿ. ಎಸ್. ಚಂದ್ರಶೇಖರ್

□ ಕಿಟ್ಟು □ ಕಪಟಕವಿ □ ಕೇಫ □ ಅಪ್ರಸ್ತುತ

□ ಚಂಬಾ

ಬಿಡಿಪ್ರತಿ ;
ಕೇವಲ ಒಂದೂವರೆ ರೂಪಾಯಿ

ಸಂಪುಟ-೪
ಸಂಚಿಕೆ-೧
ಅಕ್ಟೋಬರ್-1986




(ತಿಳಿನಗೆಯ ಕಾರಂಜಿ)

ಸಂಪುಟ ೪ ಸಂಚಿಕೆ ೧

ಅಕ್ಟೋಬರ್ 1986

ಜನ್ಮ ದಿನೋತ್ಸವ ಸಂಚಿಕೆ

ಬಿಡಿ ಪ್ರತಿ :—ಕೇವಲ ಒಂದೂವರೆ ರೂಪಾಯಿ

ವಾರ್ಷಿಕ ಚಂದಾ ರೂ. 15/-

ಆಜೀವ ಚಂದಾ : ರೂ. 150/-

ಗೌರವ ಸಲಹೆಗಾರರು :
ಶ್ರೀ ಅ.ರಾ.ಸೇ.
ಶ್ರೀ ಶೇಷಗಿರಿ

ಸಂಪಾದಕರು ಮತ್ತು ಪ್ರಕಾಶಕರು :
ಶ್ರೀ ಶಿವಕುಮಾರ್

ಅಪರಂಜಿ ಕಾರ್ಯಾಲಯ
36, 6ನೇ ಮುಖ್ಯ ರಸ್ತೆ
ಮಲ್ಲೇಶ್ವರಂ
ಬೆಂಗಳೂರು–560 003

ಈ ಸಂಚಿಕೆಯಲ್ಲಿ.........


| ಲೇಖನ | ಲೇಖಕ/ಲೇಖಕಿ | ಪುಟ |
|---|---|---|
| ಅಪರಂಜಿ ಕಿಡಿ | ಆನಂದ್ | 4 |
| ವಿನೋದನ ಮುವತ್ತೈದರ ಹುಟ್ಟು ಹಬ್ಬ | ಶಿವು | 6 |
| ಚುಟುಕಗಳು | ಎಂ.ವಿ.ಸೀ | 7 |
| ದಿ॥ ದಾಶರಥಿ ದೀಕ್ಷಿತರು | ಅ.ರಾ.ಸೆ. | 9 |
| ದಾಶರಥಿ ದೀಕ್ಷಿತ್ | ಜಿ.ಎನ್.ಜಿ | 10 |
| ಒಂದು ನವ್ಯ ಕಥೆ | ಶಿಲಾಬಾಲಕ | 12 |
| ನಿಮ್ಮ ಬುದ್ಧಿಗೆ ಸವಾಲು | ಚಂದ್ರು | 14 |
| ಬೆಂಗಳೂರು ಇಂದು–2 | ನಳಿನೀ ಪ್ರಿಯ | 15 |
| ಓ. ಟಿ. ಮಹಿಮೆ | ಲೀಲಾ ಮಿರ್ಲೆ | 18 |
| ಬಾಳ್ವಿಗೆ ಕನ್ನಡ | ಬಿ. ಎಸ್. ಚಂದ್ರಶೇಖರ್ | 21 |
| ಒಂದಾನೊಂದು ಕಾಲದಲ್ಲಿ | ಚಂದ್ರು | 26 |
| ವಕೀಲಿ-ವಶೀಲಿ | ಕಿಟ್ಟು | 28 |
| ಬಿಯರೀಕ್ಷೆ | ಕಪಟ ಕವಿ | 30 |
| ಇಪ್ಪತ್ತೊಂದನೆಯ ಶತಮಾನ-<br>ನನ್ನ ನಿರೀಕ್ಷೆ | | |
| ಒಂದು ವಿಚಾರ ಸಂಕೀರ್ಣ | ಕೇಫ | 31 |
| | ಶಿವು | 34 |
| | ಅ.ರಾ.ಸೆ | 38 |
| | ಜಿ.ಎನ್.ಜಿ. | 42 |
| | ಅಪ್ರಸ್ತುತ | 46 |
| | ಚಂಬಾ | 49 |
| ಪರಿಶಿಷ್ಟ | ಅ.ರಾ.ಸೇ. | 53 |

ವ್ಯಂಗ್ಯ ಚಿತ್ರಗಳು ಚಂದ್ರು





ಮುದ್ರಣ ಇಂಪ್ರೆಷನ್ಸ್, ಮಲ್ಲೇಶ್ವರಂ, ಬೆಂಗಳೂರು

ದೂರವಾಣಿ 363444, 362989

# ಅಪರಂಜಿ

(ತಿಳಿನಗೆಯ ಕಾರಂಜಿ)

ಸಂಪುಟ ೪ ಅಕ್ಟೋಬರ್ 1986 ಸಂಚಿಕೆ ೧

(ಜನ್ಮದಿನೋತ್ಸವ ಸಂಚಿಕೆ)

---

ಅಕ್ಷರವನ್ನರಿತು ಕೊಳ್ಳದೆ ಮಾಡಿದ ಕರ್ಮವು ಅಂತವನ್ನುಳ್ಳದ್ದು

—ಬೃಹದಾರಣ್ಯಕ

---

ಕರ್ಮಗಳೆಲ್ಲವೂ ಜ್ಞಾನಪ್ರಾಪ್ತಿಗೆ ಸಾಧನಗಳು. ನಾಶವಿಲ್ಲದ, ನಿತ್ಯವಾದ ಬ್ರಹ್ಮವನ್ನು ಅರಿತುಕೊಳ್ಳದೆ ಸ್ವರ್ಗಾದಿ ಭೋಗಗಳನ್ನು ಬಯಸಿಮಾಡಿದ ಕರ್ಮಗಳ ಫಲವು ಶಾಶ್ವತವಾದ ಬ್ರಹ್ಮದ ಆನಂದವನ್ನು ಕೊಡಲಾರದು. ಏಕೆಂದರೆ ಕರ್ಮದ ಫಲವು ಕ್ಷರ(ಕ್ಷಯಿಸುವ ಸ್ವಭಾವದ್ದು)

ಇನ್ನು ಈಗ ಅಭಿವೃದ್ಧಿಗಾಗಿ ಮಾಡುವ ಯೋಜನೆಗಳು, ಬಡತನ ನೀಗಿಸಲು (ಮತಗಳಿಗಾಗಿ?) ಕೊಡುವ ಸಾಲಗಳ ಮೇಳಗಳು ಇನ್ನೇನು ?

ಕೊಟ್ಟ ಸಾಲಕ್ಕೆನುಗುಣವಾಗಿ ಉತ್ಪಾದನೆ ಇದೆಯೇ ? ಕೊಟ್ಟಗಂಟು ಬರುತ್ತದೆಯೋ, ಆಗಂಟು ಎಂಟಾಣೆ ಯಾಗುತ್ತದೆಯೋ? ಕೇಳುವವರಾರು? ಹೇಳುವವರಾರು?

ಸಾಲ ಕೊಟ್ಟಾಗ ದಾರಿದ್ರ್ಯರೇಖೆಯಿಂದ ಮೇಲಕ್ಕೆದ್ದವರು ಆ ಮೇಳ ಮುಗಿದೊಡನೆ 'ಹಾ,ತುಂಬು ಬಟ್ಟಲನು' ಎನ್ನುವರೋ ಇಲ್ಲವೋ? ಅಂಕಿ ಸಂಖ್ಯೆಗಳು ಅದನ್ನು ಅಧ್ಯಯನ ಮಾಡ ಬಲ್ಲವೇ?

ಉತ್ಪಾದನೆಯನ್ನು (!) ಖಚಿತಪಡಿಸುವ ವ್ಯವಸ್ಥೆ ಈ ಕೂಡಲೇ ಆಗಲಿ ಎಂದು ಅಪರಂಜಿ ಹಾರೈಸುತ್ತಾಳೆ, ಸಹೃದಯರಿಗೆ ಶುಭಾಶಯಗಳು.

# ಅಪರಂಜಿ ಕಿಡಿ

—ಆನಂದ್

---

ಮೈಸೂರಿನಲ್ಲಿ ಎರಡು ಮೆಡಿಕಲ್ ಕಾಲೇಜ್ ವಿದ್ಯಾರ್ಥಿಗಳ ನಡುವೆ ಘರ್ಷಣೆ ಸಂಭವ

—ಸುದ್ಧಿ

ವಿದ್ಯಾರ್ಥಿಗಳ ಜಗಳದಲ್ಲಿ ರೋಗಿ ಬಡವಾದ !

* * *

ಐ.ಟಿ.ಐ.ನಿಂದ ಗುಂಡಿ ಒತ್ತುವ ಅಗ್ಗದ ಫೋನು

—ಪತ್ರಿಕೆ

ಅಗ್ಗದ ಫೋನು, ನುಗ್ಗದ ವಾಣಿ !

* * *

ದೆಹಲಿಯ ಸಮಾಜ ವಿಜ್ಞಾನದ ಮೇಳಕ್ಕೆ ದಕ್ಷಿಣ ಆಫ್ರಿಕಾದ ಇಬ್ಬರು ಪ್ರತಿನಿಧಿಗಳಿಗೆ ಆಹ್ವಾನ

—ಸುದ್ದಿ

ಅವರನ್ನು ದೂರ ಕೂರಿಸುತ್ತಿದ್ದಾರೋ ?

* * *

ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ ಬೆಂಗಳೂರಿನ ಗಾಜಿನ ಮನೆಯಲ್ಲಿ

—ಸುದ್ದಿ

ಸದಸ್ಯರು ರಾಜೀವರತ್ತ ಕಲ್ಲು ತೂರುವುದರಲ್ಲಿ ಸಂಶಯವಿಲ್ಲ !

* * *

ರಿಲೆಯನ್ಸ್ ವಿಚಾರಣೆಗೆ ಸಿದ್ಧ

—ಪ್ರನಬ್ ಮುಖರ್ಜಿ

ಅಂದರೆ ಅದೇನು ಸಿದ್ಧತೆಗಳನ್ನು ಮಾಡಿಕೊಳ್ಳಬೇಕೋ ?

* * *

ಟೆಲಿಫೋನ್ ಸಿಬ್ಬಂದಿಗಳ ಮುಷ್ಕರಕ್ಕೆ ಅಂತ್ಯ

—ಪತ್ರಿಕೆ

ಅರೆ, ಅವರು ಮುಷ್ಕರ ಹೂಡಿದ್ದೇ ನಮಗೆ ಗೊತ್ತಾಗಲಿಲ್ಲವಲ್ಲ !

* * *

ಬೆಂಗಳೂರು ನಗರಕ್ಕೆ ಸ್ವಚ್ಛ ನೀರು ಭರವಸೆ

—ನಗರಾಭಿವೃದ್ಧಿ ಸಚಿವರು

ಸಾಗರದಿಂದ ಬಂದ ಸುದ್ದಿ ನಿಜವೇ ಇರಬೇಕು !

* * *

ಅತೃಪ್ತಿಕರ ಉತ್ತರ—ಕಾಂಗ್ರೆ ಸಭಾತ್ಯಾಗ

—ವಿಧಾನಸಭೆ ಸುದ್ದಿ

ತೃಪ್ತಿಕರ ಉತ್ತರಗಳನ್ನೇ ಕೊಡಲು ಇದೇನು ರಾಮರಾಜ್ಯವೆ ?

* * *

ವರಾಹಿ ಯೋಜನೆಯಲ್ಲಿ ರಾಜ್ಯದ ಬೊಕ್ಕಸಕ್ಕೆ ಹಲವು ಕೋಟಿ ನಷ್ಟ

—ಸಾರ್ವಜನಿಕ ಲೆಕ್ಕಪತ್ರ ಸಮಿತಿ

ಅರಣ್ಯರೋದನ ಅಂದರೆ ಇದೇ ಏನೋ ?

* * *

# ವಿನೋದನ ಮೂವತ್ತೈದರ ಹುಟ್ಟು ಹಬ್ಬ

—ಶಿವು

ಈ ಬಾರಿ, ಆಗಸ್ಟ್ ಹದಿನೈದರ ಸ್ವಾತಂತ್ರ್ಯ ದಿನ ನಿಜವಾಗಿಯೂ ಒಂದು ಅಪೂರ್ವ ಸಂದರ್ಭ. ಅಂದು ಮೂವತ್ತೈದು ತುಂಬಿದ 'ವಿನೋದ' ನ ಹುಟ್ಟು ಹಬ್ಬ. ಮದ್ಯಾಹ್ನ ಮೂರುಘಂಟೆಗೆ ಹಾಸ್ಯ ಕಾರಂಜಿ. ಎರಡೂಮುಕ್ಕಾಲಿಗೆ ಅಲ್ಲಿದ್ದೆ. ಹೋಗುತ್ತಲೆ ದಿ॥ ದಾಶರಥಿ ದೀಕ್ಷಿತರ ಆತ್ಮೀಯ ಸ್ವಾಗತ. ಅನೇಕ ಹಾಸ್ಯ ಲೇಖಕ ಲೇಖಕಿಯರನ್ನು ಭೇಟಿ ಮಾಡುವ ಸದವಕಾಶ.

ಹಾಸ್ಯ ಕಾರಂಜಿ ಮೂರುವರೆಗೆ ಮಾನ್ಯ ಅ. ರಾ. ಮಿತ್ರರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಎರಡು ಘಂಟೆಗಳ ಕಾಲ ಅವಿರತ ಹಾಸ್ಯದ ಹೊನಲು! ಅಂದು ನಗಿಸಿದ ದೀಕ್ಷಿತರು ಇಂದು ಇಲ್ಲವೆಂದರೆ ನಂಬಲೂ ಸಾಧ್ಯವಿಲ್ಲ. ಗೋಷ್ಠಿಯ ಕೊನೆಗೆ ಅ.ರಾ.ಮಿತ್ರರವರು ಅವರದೇ ಆದ ಅನನುಕರಣೀಯ ಶೈಲಿಯಲ್ಲಿ ನಾಲ್ಕು ಮಾತನಾಡಿದರು. ನಕ್ಕು, ನಕ್ಕು ಸುಸ್ತಾಯಿತು. ಕಾಫಿಯ ನಂತರ, ಹಾಸ್ಯ ಕವಿ ಗೋಷ್ಠಿ. ಅಧ್ಯಕ್ಷತೆಯನ್ನು ಪೂಜ್ಯ ಎಂ.ವೀ. ಸೀತಾರಾಮಯ್ಯನವರು ವಹಿಸಿದ್ದರು, ಮೊದಲ ಒಂದೆರೆಡು ಕ ವ ನ ಗ ಳು ಸ್ವಲ್ಪ ಗಾಭರಿಯನ್ನುಂಟುಮಾಡಿದರೂ, ನಂತರದ ಕವಿಗಳ ಹಾಸ್ಯ ಪ್ರಜ್ಞೆ ನಿಜವಾಗಿಯು ಖುಷಿ ಕೊಡುವಂತಹವು. ಶ್ರೀಯುತ ವ್ಯಾಸರಾಯರ "ಪರಭಾಷೆಯ ಕೋಳಿ" ನಿಜಕ್ಕೂ ಕಚಗುಳಿಯಿಟ್ಟ ಹಾಗಿತ್ತು.

ಶ್ರೀಯುತ ಜಿ. ನಾರಾಯಣರವರು ತಮ್ಮ ಮುಕ್ತಾಯ ಭಾಷಣದಲ್ಲಿ ಅಪರಂಜಿ ಬಗ್ಗೆ ಬಹಳ ಅಭಿಮಾನದ ಮಾತುಗಳನ್ನಾಡಿದರು. ಅವರ ಹೃದಯ ವೈಶಾಲ್ಯ ನಿಜಕ್ಕೂ ಅಪರಂಜಿಗೆ ಹೊಸ ಉತ್ಸಾಹ ತಂದಿದೆ ಎಂದರೆ ತಪ್ಪಾಗಲಾರದು.

ಪೂಜ್ಯ ಎಂ. ವೀ. ಸೀ ಯವರು ಆದರದಿಂದ ಅಪರಂಜಿಯನ್ನು ಹರಸಿ, ಉಡುಗೊರೆಯಾಗಿ ತಮ್ಮ ನಾನ್ಸೆನ್ಸ್ ರೈಮ್ ಶೈಲಿಯ ಚುಟಕಗಳನ್ನು ನೀಡಿದ್ದಾರೆ. ಅವರಿಗೆ ಅಪರಂಜಿ ಆಭಾರಿ.

ಅಪರಂಜಿ ವಿನೋದನ ಹುಟ್ಟು ಹಬ್ಬಕ್ಕೆ ಅಭಿನಂದನೆ ಸಲ್ಲಿಸುತ್ತಿದ್ದಾಳೆ, ಇದೇನು ಆಗಸ್ಟಿನ ಹುಟ್ಟು ಹಬ್ಬಕ್ಕೆ ಅಕ್ಟೋಬರಿನಲ್ಲಿ ಅಭಿನಂದನೆಯೋ ಅಂತ ಮೂಗೆಳೆಯ ಬೇಡಿ, ಅಣ್ಣ-ತಂಗಿಯರ ಮಧ್ಯೆ ಆಗಸ್ಟೇನು, ಅಕ್ಟೋಬರೇನು, ಅಲ್ಲವೆ !



# ಚುಟುಕಗಳು

—ಎಂ. ವಿ. ಸೀತಾರಾಮಯ್ಯ

---

ಪಡುಖಾನೆಯಲಿ ಕುಡಿಯಲು ಎತ್ತಿದ
ಸಿಪಾಯಿ ಶರಾಬು ಶೀಸೆ;
ಗಂಟಲಿಗದು ಗುಟುಕಿಳಿಯುವ ಮೊದಲೆ
ಶರಾಬು ಕುಡಿಯಿತು ಮೀಸೆ.

ಮಂತ್ರಿಯ ಕೈಗೆ ಕೊಟ್ಟರು ತುರಾಯಿ,
ಹಾಕುತ ಕೊರಳಿಗೆ ಹಾರ;
ಬಾಗಲು ಜಾರಿತು ಅವನ ಪರಾಯಿ
ಜಗ್ಗಲು ಹೊಟ್ಟೆಯ ಭಾರ

ಶ್ರಾದ್ಧದ ಮನೆಯಿಂ ಹಿಂತಿರುಗುತ್ತಿರೆ
ಬಿದ್ದಂ ಸೈಕಲ್ ಶಾಸ್ತ್ರಿ
ಮಂಡಿಯು ತರಚಿ, ಮೂಗದು, ಉರಚಿ
ಸಿದ್ಧಂ ಬಿಟ್ಟಿಯ ಪ್ಲಾಸ್ತ್ರಿ.

ಕೈಭಾಷೆಯ ಕಲಿ ಹೇಡಿಗಳಿಗೆ ಹುಲಿ
ಖಾಕೀ ದಿರಸಿನ ಪೋಲೀಸು
ಅವನನ್ನೊಲಿಸಲು ಅಪರಾಧಿಗಳು
ಮಾಡುವರವನಿಗೆ ಮಾಲೀಸು.

ಹಿಂದೊಂದಾಣೆ ಇಂದೊಂದ್ರುಪಾಯಿ
ಬಣ್ಣ ಬದಲಾಯಿಸಿತು ಮೂಸುಂಬೆ
ರಾಜಕಾರಣದ ಕಳ್ಳವೇಟೆಯಲಿ
ಸುಳಿದಾಡುತ್ತಿವೆ ಗೋಸುಂಬೆ.

ಗೋಕಾಕ್ ವರದಿ ಜಾರಿಗೆ ಬರಲಿ
ಎನ್ನುತ ಚಳವಳಿ ಮಾಡಿದರು
ಕೆಲವರು ಸರದಿ ಉಪವಾಸದಲಿ
ಹೊಟ್ಟೆಯ ತುಂಬೇ ಹಾಡಿದರು

ನಾವೆಲ್ಲ ಸೊಗಸಾದ ಕಾರ್ಬನ್ನು ಕಾಪಿಗಳು
ಬುದ್ಧಿವಂತರ ಬಾಯ ಪೀಪಿಗಳು
ಬೆಪ್ಪು ಬುರುಡೆ ಮೇಲೆ ಬಿಳಿಯ ಟೋಪಿಗಳು
ದೇಶಭಕ್ತರು ನಾವು ವಿಪೀ (VPe)ಗಳು.

ಹತ್ತುಕಡೆ ಹರಿಯುವುದು ಪಡ್ಡೆ ಹುಡುಗರ ಕಣ್ಣು
ಸುಲಿದ ಬಾಳೆಯ ಹಣ್ಣು ಬೀದಿ ತಿರುಗುವ ಹೆಣ್ಣು
ಅಂಥವರಿಗಿಂಥವಳು ಸಿಕ್ಕ ಸೀರುಂಡೆ
ಬೀದಿ ಬಾಯಲ್ಲಿವಳು ರಸ್ತೆರಂಡೆ.

ಖಾಯಿಲೆಗಗತ್ಯ ಮೊದಲಿಷ್ಟು ಮುದ್ದು
ಆಮೇಲೆ ಉದರಕ್ಕೆ ಹಾಕುಮದ್ದು
ಜಗ್ಗದಿರೆ ಸಗ್ಗದಿರೆ
ದಿವ್ಯೌಷಧ ಉದಾಸೀನದ ಗುದ್ದು.

ಬೇಕೇನು ನಿನಗೊಳ್ಳೆ ಹಾಸ್ಯ ?
ಆಗಯ್ಯ ಗಾಂಪರೊಡೆಯರ ಶಿಷ್ಯ-
ನಿತ್ಯನೀನವರಿಗೆ
ಒಪ್ಪಿಸಯ್ ತಾಯೂರ ಉಂಡೆ ನಶ್ಯ

———

# ಡಿ|| ದಾಶರಥಿ ದೀಕ್ಷಿತರು

—ಅ.ರಾ.ಸೆ.

ದೀಕ್ಷಿತರು ದಾವಣಗೆರೆ ಹರಿಹರ ಪ್ರದೇಶದವರು. ನನ್ನ ಸ್ನೇಹಿತರಿಗೂ, ಬಂಧುಗಳಿಗೂ ಚಿರಪರಿಚಿತರು. ನಾನು ಅರವತ್ತರ ದಶಕದಲ್ಲಿ ಬೆಂಗಳೂರಿನಲ್ಲಿ ಅವರ ಮನೆಯಲ್ಲಿ ನೋಡಿದೆ. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಅವರ ಸ್ನೇಹ, ಅಭಿಮಾನಗಳನ್ನು ಅನುಭವಿಸಿ ಅವರಿಗೆ ಋಣಿಯಾಗಿದ್ದೇನೆ.

ಅವರ 'ಅಳಿಯ ದೇವರು' ನಾಟಕ, ದಫೇದಾರ್ ದೇರಣ್ಣ, ಗಾಂಪರಗುಂಪು, ಲೇಖನ ಮಾಲೆಗಳು ಅಪಾರ ಜನಪ್ರಿಯತೆಯನ್ನು ಪಡೆದಿವೆ; ಜನರ ಮನಸ್ಸಿನಲ್ಲಿ ನಿತ್ಯನೂತನವಾಗಿವೆ.

ಕೊರವಂಜಿಯಲ್ಲಿ ಅವರ ಸಹಲೇಖಕನೆಂದು ನಾನು ಹೆಮ್ಮೆ ಪಟ್ಟುಕೊಳ್ಳುತ್ತೇನೆ. ನಗರ ಜೀವನದ ಸಿಕ್ಕುಗಳ ನಡುವೆ ಅವರು ದಾವಣಗೆರೆಯವರೇ ಆಗಿ ಉಳಿದಿದ್ದರು.

ಒಮ್ಮೆ ಅವರು ನನ್ನನ್ನು ಕಾಣಲು ಜಯನಗರದಿಂದ ಚಾಮರಾಜ ಪೇಟೆಗೆ ಆಟೋದಲ್ಲಿ ಬಂದಿದ್ದರು. ಕೆಲಸವೇನೂ ಇಲ್ಲ; ದೋಸೆ ಕಾಫಿ ಸಿಗರೇಟು ಕೊಡಿಸಿದರು. ಎರಡು ತಿಂಗಳ ಹಿಂದೆ ಹೃದಯಾಘಾತವಾಗಿ ಆಸ್ಪತ್ರೆಗೆ ಸೇರಿದ್ದೆ ಎಂದು ಹೇಳಿದ್ದರು.

'ಅಪರಂಜಿ' ಆರಂಭ ಮಾಡುವ ಮೊದಲು ಅವರು ಕ್ರಿಯಾತ್ಮಕವಾಗಿ ಸಮಾಲೋಚನೆಯಲ್ಲಿ ಭಾಗವಹಿಸಿದ್ದರು. ಅಪರಂಜಿಯ ಪ್ರಥಮ ಜನ್ಮದಿನೋತ್ಸವದಲ್ಲಿ ಮುಖ್ಯ ಅತಿಥಿಗಳಾಗಿದ್ದರು. ಅವರ ಮರಣ, ಕನ್ನಡ ನುಡಿಗೆ, ಅಪರಂಜಿಗೆ ಒಂದು ದೊಡ್ಡನಷ್ಟ. ಅವರ ಕುಟುಂಬದವರ ದುಃಖದಲ್ಲಿ ಅಪರಂಜಿಯೂ ಪಾಲುದಾರಳಾಗಿದ್ದಾಳೆ.

ದಾಶರಥಿ ದೀಕ್ಷಿತರಿಗೆ ಅಪರಂಜಿಯ ವಿನಮ್ರ ಶ್ರದ್ಧಾಂಜಲಿ.

# ದಾಶರಥಿ ದೀಕ್ಷಿತ್

—ಜಿ.ಎಸ್.ಜಿ

ದಿವಂಗತ ದಾಶರಥಿ ದೀಕ್ಷಿತರು ಬಲ್ಲವರೆಲ್ಲರಿಗೂ ದೀಕ್ಷಿತರು–ನಾಟಕದ ಅವರ ಶಿಷ್ಯರಿಗೆ "ಗುರು"ಗಳು-ಆದರೆ-ಮನೆಯುವರಾದ ನಮಗೆ–"ದಾಸಿ" ಇಂದು "ದಾಸಿ" ಒಂದು ನೆನಪು ಮಾತ್ರ.

ನಗಿಸುವ ಪರದ ಧರ್ಮವನ್ನೇ ಕಾಯಕವನ್ನಾಗಿ ಮಾಡಿಕೊಂಡಿದ್ದ ಈ ಮಂಕು ತಿಮ್ಮ "ದಾಸಿ" ಎಂದಿಗೂ "ಉದಾಸ" ನಾಗದೆ-ಯಾರಿಗೂ ದಾಸ ನಾಗದ ಸ್ವಾಭಿಮಾನಿ.

ಗಾಂಧಿ ಬಜಾರಿನ "ದೀಕ್ಷಿತ್ ಅಂಡ್ ಕೋ" ಔಷಧಿ ಅಂಗಡಿ ಬಾಸ್ವೆಲ್‌ನ - ಡಾ. ಜಾನ್ ಸನ್‌ನಲ್ಲಿ ಬರುವ "ಚಾ" ಅಂಗಡಿ ಇದ್ದಂತೆ. ನಿತ್ಯ ಸಂಜೆ – ಸಾಹಿತ್ಯ ಪ್ರೇಮಿಗಳ ಬೇಟಿಯ ತಾಣ. ಕವಿ ನಿಸ್ಸಾರ್ ಅಹಮ್ಮದರ ಪುಸ್ತಕ "ಮನಸು ಗಾಂಧಿ ಬಜಾರಿ"ನ ಪ್ರೂಫುಗಳ ತಿದ್ದುವಿಕೆ ನಡೆಯುತ್ತಿದ್ದುದೇ ಅಲ್ಲೇ. ಇದು 1960 ರ ದಶಕದಲ್ಲಿ.

ಸಾಹಿತ್ಯದಲ್ಲಿ - ಹಾಸ್ಯಕ್ಕೆ ಬರವಿದ್ದ ಕಾಲದಲ್ಲಿ - ನಗಿಸುವವರನ್ನು - ಆರಿಸಿ - ಬೆಳಕಿಗೆ ತಂದವರು ದಿವಂಗತ ರಾ.ಶಿ. ಯವರು. ಕೊರವಂಜಿಯ ಕೂಸು "ದಾಸಿ" ಕೊರವಂಜಿ ಹಡೆದದ್ದು ಹವಳ ಮತ್ತು ಮಾಣಿಕ್ಯಗಳನ್ನು.

ರಸಿಕ ಹಿರಿಯರ ನಡುವೆ ತ.ರಾ.ಸು - ನಾಡಿಗೇರರ ಒಡನಾಟದಲ್ಲಿ ಹರಿಹರ-ಚಿತ್ರದುರ್ಗಗಳಲ್ಲಿ ಬೆಳೆದ ದಾಸಿಗೆ - ಉದರ ಪೋಷಣೆಗೆ ಆಸರೆ - ಬೆಂಗಳೂರಿನ ವಿಮಾನ ಕಾರ್ಖಾನೆ. ಈ ಸುಪ್ತ ಚೇತನಕ್ಕೆ ಬೇಕಾದದ್ದು ಸರಿಯಾದ ದಿಕ್ಕಿನಲ್ಲಿ ಹರಿಯಲು ಒಂದು out let. ಅದನ್ನು ಕೊಟ್ಟು ಹರಿಸಿದರು ದಿವಂಗತ ರಾ.ಶಿ.

"ಪ್ರೇತ ಸಂಹಾರ" ಇವರ ಮೊದಲ ಪುಸ್ತಕ. ನಂತರ ನಗೆನಾಟಕಗಳ ಮಹಾ ಪೂರ ಇಂದಿಗೂ ಅಳಿಯದೇ ಉಳಿದ "ಅಳಿಯ ದೇವರು" "ಗಾಂಪರ ಗುಂಪು"

ಆವರ ಸೃಜನಶೀಲ ಬರಹಗಳ ಕುರುಹುಗಳು.

ನರಸಿಂಹಾಚಾರ್ಯರ - ಗಾಂಪರೊಡೆಯರಿಗೆ "ದಾಸಿ" ಯವರಿಂದ ಪುನಹ ಜೀವದಾನ. 'ಮಾವನ ಮನೆ - "ಮಾವನ ಮಗಳು" ನಗೆಗಾದಂಬರಿಗಳು - 'ಗಾಂಪರ ಗುಂಪು' ನಾಟಕ-ಗಾಂಪರ episode ಗಳು ಅವರ ಪ್ರವಾಸ ಸಾಹಿತ್ಯ- 'ಹಾಸ್ಯ ಲೇಖಕನ ದೃಷ್ಟಿಯಲ್ಲಿ. ಇವಲ್ಲದೇ "ಬಾಳ ಬಂಧನ" ವೆಂಬ serious ಕಾದಂಬರಿ. ಬಾಳಬಂಧನ ಎಡವಿದಾಗ serious ಬರಹಕ್ಕೆ ಎಳ್ಳು ನೀರು.

ಗೊಂಬೆಯಾಟ ನಾಟಕ – ಚಲನ ಚಿತ್ರಗಳ ಗೀಳಿನಲ್ಲಿ ಬರಹಕ್ಕೆ ಕೆಲ ಕಾಲ ವಿರಾಮ. ಈ ಗೀಳು - ಬರಹದ ಬೀಳಿಗೆ ಕಾರಣವಾಯಿತೇನೋ ಎನ್ನುವಷ್ಟರಲ್ಲಿ– ಮರಳಿ ಮರಕ್ಕೆ ಎಂಬ ಇನ್ನೊಂದು "ಗಾಂಪಗಾಥ" ಪ್ರಕಟನೆಗೆ ತಯಾರಿ, ಇಷ್ಟರಲ್ಲೇ ಗಾಂಪಗುರುವೇ ಮರ! ಸೇರಿದ್ದು ವಿಪರ್ಯಾಸವೇ ಸರಿ.

ಹಲವು ರಂಗಗಳಲ್ಲಿ ಹಾಯಿಸಿದ "ಮೂಗಿಗೆ" ದೂರದರ್ಶನದ "ಘಾಟು" ವಾಸನೆ ಬಡಿದು ಗಾಂಪ ಗುರುವನ್ನು ದೂರದರ್ಶನದ ತೆರೆಯ ಮೇಲೆ ತರುವ ತರದೂದಿನಲ್ಲಿದ್ದಾಗಲೇ ಚಾಚಿದ ಮೂಗನ್ನೇ ಮುಟ್ಟಿತು - ಅ ಕಾಣದ ಕೈ ವಿಧಿ.

ದಿವಂಗತ – ದಾಶರಥಿ ದೀಕ್ಷಿತರ – ದೊಡ್ಡಕ್ಕನ ಮೊಮ್ಮಗ ಈ ನತದೃಷ್ಟ ಜಿ.ಎನ್.ಜಿ. ಅವರ ಗಾಂಪರ ಜಾಡನ್ನೇ ಹಿಡಿದು ಬರೆದ "ಪಂಚ ಕಲ್ಯಾಣಿ" ಸೆಪ್ಟಂಬರ್ ಅಪರಂಜಿಯಲ್ಲಿ ಬೆಳಕು ಕಂಡಿತು. ಅಪರಂಜಿಯಲ್ಲಿ ಬಂದ 'ಪಂಚ ಕಲ್ಯಾಣಿ' ಯನ್ನು 'ಅಜ್ಜ ದಾಸಿಗೆ ತೋರಿಸಿ – "ಪಂಚ ಕಲ್ಯಾಣಿ" ಯನ್ನು ಏರಿದ ಬೆನ್ನನ್ನು ಅಜ್ಜ ನಿಂದಲೇ ಚಪ್ಪರಿಸಿ ಕೊಳ್ಳಬೇಕೆಂಬ "ಹಮ್ಮಿ"ಗೆ - ಅಜ್ಜ ದಾಸಿ ಕೈಕೊಟ್ಟರು- ಎಂದೆಂದಿಗೂ ನೆನಸಿ ಕೊಳ್ಳುವಂತೆ ಕೈಕೊಟ್ಟರು. ನನ್ನನ್ನು - ನಮ್ಮನ್ನು ಅಗಲಿದ "ದಾಸಿಗೆ" ಇದೋ ಅಶ್ರು ತರ್ಪಣ.



# ಒಂದು ನವ್ಯ ಕಥೆ

—ಶಿಲಾ ಬಾಲಕ

---

ಸುಮಾರು ಎರಡು ತಿಂಗಳ ಹಿಂದೆ, ನಾನು ಇಹ ಜಗತ್ತಿನ ಅರ್ಥವಿಲ್ಲದ, ಅಸಂಬಂದ್ಧ ಆತಂಕಗಳಿಂದ ಮನಸ್ಸು ಕೆಟ್ಟು ಅಂತರ್ಮುಖಿನಾದದ್ದು ಎಲ್ಲರಿಗೂ ವಿದಿತವೇ (At Least ನನ್ನ ನಿಕಟವರ್ತಿಗಳಿಗೆ). ಆಗ ನಾನು 'ನನ್ನ' ನಿಜ ಸ್ವರೂಪ ವನ್ನು ಕಂಡು ಹಿಡಿಯಲು ಹಾಗೂ ಈ ವಿಶ್ವದ ಮೂಲ ರೂಪವನ್ನು ಕಾಣಲು ದೊಡ್ಡ ಆಲದ ಮರದ ಕೆಳಗೆ ಘೋರವಾದ ತಪಸ್ಸು ಮಾಡಲು ಕುಳಿತೆ. ನನ್ನ ಆಗಾಧವಾದ ವಿಲ್ ಪವರ್ ಅನ್ನು ನೋಡಿ ಜಗನ್ನಿಯಾಮಕನಿಗೆ ವಿಸ್ಮಯವಾಗಿರ ಬೇಕು. ಎರಡನೇ ದಿನವೇ ನನ್ನ ಮನಃಚಕ್ಷು (ಕನ್ನಡದಲ್ಲಿ ಇದನ್ನ Minds eye ಅಂತಾರಂತೆ) ಗಳಿಗೆ ಕೈಯಲ್ಲಿ ಕಮಂಡಲ ಹಿಡಿದ ಮುನಿವರ್ಯನೊಬ್ಬ ಕಂಡು ಬಂದ. ಪಂಜಾಬ್ ಆಂತಕವಾದಿಯ ತರಹ ಇದ್ದ ಅವನನ್ನು ನೋಡಿ ಭಯವಾಯಿತು. ಅವನು ಮಂದಸ್ಮಿತನಾಗಿ ಹೇಳಿದ (ಬಲ್ಲವರು ಉವಾಚ ಎಂದು ಓದಿಕೊಳ್ಳಬಹುದು) :— "ಮಗೂ, ನಿನ್ನ ಭಕ್ತಿಗೆ ಪ್ರಸನ್ನನಾದ ಭಗವಂತನು ನನ್ನನ್ನು ಕಳಿಸಿದ್ದಾನೆ. ನಿನಗೆ ಬೇಕಾದ ವರವನ್ನು ಕೇಳಿಕೋ !" ನಾನು "ಕೇಳಿದ ವರ ಇಲ್ಲೇ sanction ಆಗುತ್ತೋ, ಅಥವಾ ತಿರುಗಿ ಹೆಡ್ ಕ್ವಾರ್ಟರ್ಸ್‌ಗೆ ಹೋಗುವುದೋ" ? ಅಂದೆ. ಮುನಿವರ್ಯ ಕೋಪಗೊಳ್ಳದೆ ಹೇಳಿದ "ಜೀವನದಲ್ಲಿ ನಿನಗಾಗಿರುವ ಬೇಸರ ನಮಗೆ ಗೊತ್ತುಂಟು. ಅದನ್ನು ಕಳೆಯಲು ಒಂದು ಉಪಾಯವಿದೆ. ನಾನು ಈ ಕಮಂಡಲುವಿನಲ್ಲಿ ಇರುವ ನೀರನ್ನು ನಿನಗೆ ಕೊಡುವೆ. ಅದನ್ನು ಯಾವ ಕಲ್ಲಿನ ಮೇಲೆ ಚೆಲ್ಲಿದರೂ, ಆ ಕಲ್ಲು ತನ್ನ ಕಥೆಯನ್ನು ನಿನಗೆ ಹೇಳ ಬಲ್ಲದು, ಈ ಹವ್ಯಾಸದಿಂದ ನಿನಗೆ ಜೀವನದಲ್ಲಿ ಉತ್ಸಾಹ ಪುನಃ ಉಕ್ಕಿ ಬರುವುದರಲ್ಲಿ ಸಂದೇಹವಿಲ್ಲ ಇಷ್ಟು ಹೇಳಿ ಮುನಿವರ್ಯ ದೂರದರ್ಶನದ ಬೇತಾಳದಂತೆ ಮಾಯವಾದ. ನಾನು ಕಣ್ಣು ಬಿಟ್ಟು ನೋಡಿದರೆ ನನ್ನ ಮುಂದೆ ಒಂದು ಬೆಳ್ಳಿಯ ಪಾತ್ರೆಯಲ್ಲಿ ಮಂತ್ರಿತ ನೀರು! ಭಕ್ತಿಯಿಂದ ಅದನ್ನು ತೆಗೆದುಕೊಂಡು ಮನೆಗೆ ಬಂದೆ.

ಮೂರನೇ ಸಂಜೆ ಕಬ್ಬನ್ ಪಾರ್ಕಿನ ಕಲ್ಲು ಬೆಂಚೊಂದರ ಮೇಲೆ ಆ ತೀರ್ಥ ವನ್ನ ಪ್ರೋಕ್ಷಿಸಿದೆ, ಆಹಾ ! ಆ ಕಲ್ಲು ತನ್ನ ನಿತ್ಯ ಜೀವನದ ಅನುಭವಗಳನ್ನು ಹೇಳ ತೊಡಗಿತು. ಕಪ್ಪುಹಣ, ರಾಜಕೀಯ, ರುದ್ರ ಹಾಗೂ of course ಶೃಂಗಾರ ರಸ ಗಳಿಂದ ತುಳುಕುವ ಪ್ರಸಂಗಗಳನ್ನು ಕೇಳುತ್ತ ಕ(ತ)ಲ್ಲೀನನಾದೆ. ಮರುದಿನ

ಪ್ರಮುಖ ನ್ಯಾಯಲಯದ ಹೊರಗಿರುವ ಬೆಂಚು ! ಅಲ್ಲಿಯ ವಹಿವಾಟುಗಳ ಕತೆ ಕೇಳಿ ನನಗೆ ಆಶ್ಚರ್ಯವಾಯಿತು. ಕಪ್ಪು ಕೋಟಿನ ಒಳಗೆ ಬಿಳಿಯ ಹೃದಯ ಬರುವುದು ಅಸಂಬದ್ಧ ಅಲ್ಲವೇ ? ಹೀಗೇ ನಾಲ್ಕು ದಿನ ವಿವಿಧ ಶಿಲಾ ಕಥೆಗಳನ್ನು ಕೇಳಿ ನನ್ನ ಮನಸ್ಸು ತಿಳಿಯಾಯಿತು. ಬೇಲೂರಿನ ದೇವಾಲಯಕ್ಕೆ ಹೋಗಿ ಈ ಪ್ರಯೋಗ ಮಾಡಲೇ ಎಂಬ ದುಶ್ಚಿಂತೆ ಮನಸ್ಸಿಗೆ ಬಂದರೂ ಹಣದ ಮುಗ್ಗಟ್ಟಿನಿಂದ ಅದು ಸಾಧ್ಯವಾಗಲಿಲ್ಲ.

ಮೊನ್ನೆ ಮನೆಗೆ ಅಫೀಸಿನಿಂದ ಬರುತ್ತಿದ್ದಾಗ ಅರಾರಾ ಕಚೇರಿಯ ಮುಂದಿನ ಒಂದು ಭವ್ಯ ಸೌಧ ಕಣ್ಣಿಗೆ ಬಿತ್ತು. ಓಡಿಹೋಗಿ ಮನೆಯಿಂದ ಸ್ಪೆಷಲ್ ನೀರನ್ನು ತಂದೆ. ಈ ಸೌಧದ ಮೇಲೆ ನೀರನ್ನೆಲ್ಲ ಚೆಲ್ಲಿ ಏನಾಗುವುದೋ ನೋಡೋಣ ಎಂದು ನಿಶ್ಚಯಿಸಿದೆ ! ಇನ್ನೇನು ನೀರನ್ನೆರಚಲು ನಾನು ರೆಡಿಯಾಗಿದ್ದಾಗ ಕೈ ಯಾರೋ ಹಿಡಿದಂತಾಯಿತು. ನೋಡಿದರೆ, ಮುನಿವರ್ಯ !

"ಬೇಡ, ಬೇಡ, ಮಗೂ, ಈ ಬೃಹತ್ ಕಟ್ಟಡದ ರಹಸ್ಯಗಳನ್ನು ಇಲ್ಲಿರುವ ಕಲ್ಲುಗಳೆಲ್ಲ ಏಕಕಾಲದಲ್ಲಿ ಹೇಳ ತೊಡಗಿದರೆ, ನಿನ್ನ ಮನಸ್ಸಿಗೆ ಭಾರೀ ಆಪತ್ತು ಉಂಟಾಗುವುದು ಖಂಡಿತ ! ಈ ಕಲ್ಲುಗಳು ಹುದುಗಿಸಿಕೊಂಡಿರುವ ರಾಜಕೀಯದ ಕಾರುಬಾರುಗಳು ಎಂತಹ ಕಲ್ಲೆದೆಯನ್ನು ನೀರುಮಾಡಬಲ್ಲವು ! ಬಾ !" ಎಂದು ಮುನಿ ನನ್ನನ್ನು ಪುನಃ ದೊಡ್ಡ ಆಲದ ಮರದ ಬಳಿ ಕರೆದೊಯ್ದ. ಅಲ್ಲಿ ಉಳಿದಿದ್ದ ತೀರ್ಥವನ್ನು ತನ್ನ ವಶಕ್ಕೆ ತೆಗೆದುಕೊಂಡು ಮುನಿ ಮಾಯವಾದ.

ನಡೆದದ್ದನ್ನು ನಿಜರೂಪದಲ್ಲಿ ಬರೆದಿದ್ದೇನೆ. ಇದನ್ನು ಅನೃತ ಎನ್ನುವವರು At their own risk ಹಾಗನ್ನ ಬಹುದು ! ಅವರಿಗಾಗುವ ಅನಾಹುತಕ್ಕೆ ಲೇಖಕ ಜವಾಬ್ದಾರನಲ್ಲ !



# ನಿಮ್ಮ ಬುದ್ಧಿಗೆ ಸವಾಲು! (ತೀಕ್ಷ್ಣಮತಿಗಳಿಗೆ ಮಾತ್ರ!)

## ಬೆಂಕಿ ಕಡ್ಡಿ ಚಮತ್ಕಾರ!

ಕೆಳಗಿನ ಚಿತ್ರದಲ್ಲಿ ಐದು ಚೌಕಗಳಿವೆ. ಎರಡೇ ಕಡ್ಡಿ ಜರುಗಿಸಿ, ನಾಲ್ಕು ಚೌಕಗಳನ್ನ ಮಾಡಬಲ್ಲಿರಾ?



ಉತ್ತರ: ನೋಡಿ, ಆಗತ್ತೆ! ಕಾಗದದ ಮೇಲೆ ಅಷ್ಟೇನಾ ಬೆಂಕಿಕಡ್ಡಿಗಳನ್ನ ಜರುಗಿಸಬೇಕಷ್ಟೆ!

## ಸೂಜಿ ಹುಡುಕಿ!

ಈ ಮೆದೆಲಿರೋ ಸೂಜಿನ ಹುಡುಕ ಬಲ್ಲಿರಾ?



ಉತ್ತರ: ಪಿಕ್ಲಿ ಏಕೆ? ಕಷ್ಟಪಡ್ತೀರಿ ನೀವು. ಸೂಜಿ ಮೆದೆ ಇದು. ಹುಲ್ಲಿನ ಮೆದೆ ಅಂದ್ಕೊಂಡ್ರಾ!

## ಚುಕ್ಕೆಗಳನ್ನ ಸೇರಿಸಿ - ನಿಜವಾದ ಆಶ್ಚರ್ಯ ಕಾದಿದೆ!

ಮೊದಲನೇ ಸಂಖ್ಯೆಯಿಂದ ಕ್ರಮವಾಗಿ ಎಲ್ಲ ಚುಕ್ಕೆಗಳನ್ನೂ ಸೇರಿಸಿ. ನೀವು ಊಹಿಸಲಾಗದೇ ಇರೋ ಅಂತ ಚಿತ್ರ ಕಂಡು ಬರುತ್ತೆ. ಬೇಗ ಶುರುಮಾಡಿ - ಚಿತ್ರ ಏನು ಅಂತ ಕಂಡು ಹಿಡೀರಿ!





## ನೀವೂ ಬರೆಯಬಹುದು - ವ್ಯಂಗ್ಯ ಚಿತ್ರಾನಾ!

ಖ್ಯಾತ ಚಿತ್ರಕಾರ ಚಂದ್ರ ರವರು ಐದು ಹಂತಗಳಲ್ಲಿ ಚಿತ್ರ ಬರೆಯೋ ಸುಲಭ ವಿಧಾನ ತೋರಿಸಿದ್ದಾರೆ. ಅನುಸರಿಸಿದ್ರೆ ನೀವೂ ಆರ್. ಕೆ. ಲಕ್ಷ್ಮಣ್ ಆಗಬಹುದು!

    

# ಬೆಂಗಳೂರು ಇಂದು-೭

—ನಳಿನೀ ಪ್ರಿಯ

---

## ಭಾರತದ ನವ ಭಾಗ್ಯತಾರೆ

ಮೊನ್ನೆ ಬೆಂಗಳೂರಿನಲ್ಲಿ ಭಾರತದ ಭಾಗ್ಯತಾರೆ ಉದಯವಾಯಿತು. ಉಜ್ವಲ ದೇಶ ಪ್ರೇಮಿ, ಸಕಲ ವಿದ್ಯಾಪಾರಂಗತ, ಹಾಗೂ ಭ್ರಷ್ಟಾಚಾರಿಗಳ ಸಿಂಹಸ್ವಪ್ನವಾದ ಮಾನ್ಯ ಗುಂ. ರವರು ಭಾರತದ ರಾಷ್ಟ್ರೀಯ ಕಾಂಗ್ರೇಸಿನಿಂದ, ಕ್ರಮವಾಗಿ ಶ್ರೀಯುತರುಗಳಾದ ರಾಜೀವ್‌ಗಾಂಧಿ, ವಿ.ಪಿ. ಸಿಂಗ್, ಇವರುಗಳೇ ಮೊದಲು ಗೊಂಡು ಸಾವಿರಾರು ಪಕ್ಷ ದ್ರೋಹಿಗಳನ್ನು ಉಚ್ಚಾಟನೆ ಮಾಡಿ ಪಕ್ಷವನ್ನು ಪುನೀತ ಗೊಳಿಸಿದ ಪುಣ್ಯದಿನ. ಲಾಲ್‌ಬಾಗ್‌ನಲ್ಲಿ ಸಮಾವೇಶಗೊಂಡ ಪ್ರಥಮ ಅಧಿವೇಶದಲ್ಲಿ ಪಕ್ಷಾಂತರದಲ್ಲಿ ನಂಬಿಕೆ ಇಲ್ಲದ ಎಲ್ಲ ಗಣ್ಯರೂ ಭಾಗವಹಿಸಿದ್ದರು. ಬೆಳಗ್ಗೆ ಮಂಜು (ಭಾರ್ಗವಿ ?) ಕವಿದ ವಾತಾವರಣ. ಪ್ರಾರ್ಥನೆ ಸಹಜವಾಗಿ ಶಂಕರಾಭರಣ ರಾಗದಲ್ಲಿ. ಮುಖ್ಯ ಭಾಷಣದಲ್ಲಿ, ತಮ್ಮ ಪಕ್ಷವೇ ನಿಜವಾದ ಕಾಂಗ್ರೇಸ್ ಎಂದು ಸಾರಿದ ಅಧ್ಯಕ್ಷರು, ಅದೇ ಉಸಿರಿನಲ್ಲೇ ಪ್ರಸಕ್ತ ಕಾಂಗ್ರೇಸ್ ನೇತಾರರು ದೇಶ ದ್ರೋಹಿಗಳೆಂದು ಘೋಷಿಸಿದ್ದು, ಧೀರೋದಾತ್ತ ಆತ್ಮ ವಿಮರ್ಶೆಯ ಉತ್ತಮ ಉದಾಹರಣೆಯಾಗಿತ್ತು. ನಾಡ ಜನತೆಗೆ ಈ ಸಮ್ಮೇಳನದ ಮುಖ್ಯ ಕೊಡುಗೆ. ಭಾರತದ ವ್ಯಾಪಕ ಬಡತನದ ಹಠಾತ್ ನಿರ್ಮೂಲನಕ್ಕೆ ಸಮ್ಮೇಳನದ ವಕ್ತಾರ ರೊಬ್ಬರು ನೀಡಿದ ಸಲಹೆ. ಅವರ ಪ್ರಕಾರ ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಕಾಲೇಜುಗಳನ್ನು ತೆರೆಯುವುದರಿಂದ ಹೇರಳ ಹಣಗಳಿಸಬಹುದಾದರೆ, ಪ್ರತಿಯೊಬ್ಬ ಪ್ರಜೆಗೂ ಒಂದೊಂದು ಕಾಲೇಜ್ ತೆರೆಯಲು ಅವಕಾಶಕೊಟ್ಟರೆ, ಬಡತನ ನಿರ್ಮೂಲನ ಇರಲಿ, ಭಾರತ ಅತ್ಯಂತ ಸಂಪತ್ತುಳ್ಳ ರಾಷ್ಟ್ರವಾಗುವುದರಲ್ಲಿ ಸಂದೇಹವೇ ಇಲ್ಲವಂತೆ.

## ಅಲನ್ ಬಾರ್ಡರ್

ಆಸ್ಟ್ರೇಲಿಯಾದಿಂದ ತರುಣ ಕ್ರಿಕೆಟ್ ತಂಡವೊಂದು, ಶ್ರೀಯುತ ಅಲನ್ ಬಾರ್ಡರ್‌ರವರ ನೇತೃತ್ವದಲ್ಲಿ ಬೆಂಗಳೂರಿಗೆ ಬಂದಿದ್ದು ಎಲ್ಲರಿಗೂ ತಿಳಿದ ವಿಷಯ. ಎಲ್ಲರಿಗೂ ತಿಳಿಯದ ವಿಷಯವೆಂದರೆ, ಬಾರ್ಡರ್ ಅಪರಂಜಿ

ಓದುಗರಿಗಾಗಿ ನೀಡಿದ ವಿಶೇಷ ಸಂದರ್ಶನ. ಈ ಭೇಟಿಯಲ್ಲಿ ಬಾರ್ಡರ್‌ರವರು ಆಟಗಾರರ ಅದರಲ್ಲೂ ಹೆಚ್ಚಾಗಿ ಫೀಲ್ಡರುಗಳ ದೇಹ ಧಾರ್ಡ್ಯ ಹಾಗೂ ಮಾಂಸ ಖಂಡಗಳ ಲವವಿಕೆಯು ಬಗ್ಗೆ ಮಾತನಾಡುತ್ತಿದ್ದರು.

"ನೋಡಿ, ಆಸ್ಟ್ರೇಲಿಯಾದಲ್ಲಿ ಪಂದ್ಯಕ್ಕೆ ಮುಂಚೆ ಪ್ರತಿಯೊಬ್ಬ ಫೀಲ್ಡರನೂ ಕನಿಷ್ಟಪಕ್ಷ ಎರಡು ಘಂಟೆ ವ್ಯಾಯಾಮಮಾಡಿ, ಮಾಂಸಖಂಡಗಳು ದುರಸ್ತಿನಲ್ಲಿರು ವಂತೆ ನೋಡಿಕೊಳ್ಳುತ್ತಾನೆ. ಬೆಂಗಳೂರಿಗೆ ಬಂದ ನಂತರ, ಕೇವಲ ಹತ್ತೇ ನಿಮಿಷ ಗಳಲ್ಲಿ ಈ ಮಾಂಸ ಖಂಡಗಳ ಟೋನಿಂಗ್ ಅಪ್ ವಿಧಾನವನ್ನು ತಿಳಿದು ಬಹಳ ಹರ್ಷವಾಯಿತು. ಅದೂ ಆಕಸ್ಮಿಕವಾಗಿ ತಿಳಿದದ್ದು. ನಿನ್ನೆ ಹೋಟೆಲಿನಿಂದ ಕ್ರೀಡಾಂಗಣಕ್ಕೆ ಬರುವಾಗ ಟ್ಯಾಕ್ಸಿ ತಪ್ಪಿದ್ದರಿಂದ ಆಟೋರಿಕ್ಷಾದಲ್ಲಿ ಬರಬೇಕಾಯಿತು. ಹತ್ತೇ ನಿಮಿಷದ ಪ್ರಯಾಣದಲ್ಲಿ ದೇಹದ ಮಾಂಸಖಂಡಗಳೆಲ್ಲಾ, ಚೆನ್ನಾಗಿ ಕುಲಕಿ, ಆಟದ ಮೈದಾನ ಸೇರುವ ವೇಳೆಗೆ ಆಟಕ್ಕೆ ಪೂರ್ಣವಾಗಿ ಸಿದ್ಧವಾಗಿದ್ದೆ. ನಿಜವಾಗಿಯೂ ಆಟೋಗಳು ಫೀಲ್ಡರುಗಳ ತರಬೇತಿಗಾಗಿ ದೇವರಿತ್ತ ವರ"

## ಅಲ್ಪಸಂಖ್ಯಾತರ ಯೋಗಕ್ಷೇಮ

ಈ ದೇವರಿತ್ತ ವರವನ್ನು ಕರ್ನಾಟಕ ಸರ್ಕಾರ ಅಲ್ಪಸಂಖ್ಯಾತರ ಯೋಗಕ್ಷೇಮ ಕ್ಕಾಗಿ ಉಪಯೋಗಿಸಲು ನಿರ್ಧರಿಸಿದೆಯಂತೆ. ಸರ್ಕಾರದ ವಕ್ತಾರರೊಬ್ಬರು ನೀಡಿದ ಹೇಳಿಕೆ ಪ್ರಕಾರ, ಅಲ್ಪ ಸಂಖ್ಯಾತರಿಗೆ ಉದ್ಯೋಗ ಕಲ್ಪಿಸಿಕೊಡಲು, ಅವರಿಗೆಲ್ಲಾ ಆಟೋಚಾಲನೆ ಕಲಿಸಲಾಗುವುದಂತೆ. ಇಲ್ಲಿ ಅನೇಕ ಪ್ರಶ್ನೆಗಳು ಉದ್ಭವಿಸುತ್ತದೆ. ಆಟೋ ಚಾಲನೆಯೆಂದರೆ, ಆಟೋವನ್ನು ಸರಿಯಾಗಿ ಚಾಲನೆ ಮಾಡುವುದು ಎಂಬ ಅರ್ಥವೇ, ಅಥವಾ ಎಲ್ಲಾ ಆಟೋಗಳೂ ಈಗ ಅನುಸರಿಸುತ್ತಿರುವ ಅಡ್ಡಾ ದಿಡ್ಡಿ ಕಲೆ ಯಲ್ಲಿ ಪರಿಣತಿಯೇ ? ಮೊದಲನೆಯ ಮಾರ್ಗದಲ್ಲಿ ತರಬೇತಿಯಾದರೆ ಅದು ಚಾಲಕ ರಿಗೇ ಅಪಾಯಕರ. ಸರಿಯಾಗಿ ಆಟೋ ನಡೆಸುವ ಚಾಲಕ, ಮಿಕ್ಕ ಆಟೋಗಳ ಇಂದಿನ ಹಾವಳಿಯಲ್ಲಿ ಮೂರು ದಿನ ಸಹಾ ಉಳಿಯದೇ, ಅಲ್ಪಸಂಖ್ಯಾತರು, ಇನ್ನೂ ಅಲ್ಪ ಸಂಖ್ಯಾತರಾಗುವುದು ಅನಿವಾರ್ಯ. ಹಾಗಲ್ಲದೇ ಹಾಲೀ ಅಡ್ಡಾ ದಿಡ್ಡಿ ಕಲೆಯಲ್ಲಿ ಪರಿಣತಿಕೊಡುವ ಉದ್ದೇಶವಿದ್ದರೆ, ಅದಕ್ಕೆ ಶಿಕ್ಷಕರು ಯಾರು ? ಅವರ ಕನಿಷ್ಠ ಅರ್ಹತೆಗಳೇನು ? ಮೂರು ಅಪಘಾತಗಳೇ ? ಎರಡು ಬಾರಿ ಲೈಸನ್ಸ್ ರದ್ದಾಗಿರಬೇಕೇ ? ಈ ಎಲ್ಲ ಪ್ರಶ್ನೆಗಳಿಗೂ ಸರ್ಕಾರ ಸೂಕ್ತ ಉತ್ತರ ನೀಡ ಬೇಕೆಂದು ನಮ್ಮ ವಿನಂತಿ.

## ಜೇನ್ ಫಾಂಡ

ಮೊನ್ನೆ ನನ್ನ ಸಹಪಾಠಿ ಮೂರ್ತಿ ಸಿಕ್ಕಿದ್ದ. ಹದಿನೈದು ವರುಷಗಳ ನಂತರದ ಅಪರೂಪ ಭೇಟಿ. ಅದೂ ಇದೂ ಮಾತನಾಡುತ್ತಾ "ನಾವೇನು ಕೇಳಿಕೊಂಡ್ರೂ ದಯಪಾಲಿಸ್ತಾನೆ ದೇವ್ರು. ಕೇಳೋವಾಗ ಮಾತ್ರ ಬಹಳಾ ಹಷಾರಾಗಿರಬೇಕು" ಅಂತ ಒಂದು ಗಾಹೆ ಹೇಳಿದ. ಇದೇನಿದು ಫಿಲಾಸಫಿ ಶುರು ಮಾಡ್ಬಿಟ್ನಲ್ಲಾ ಎಂದೂ ಇಲ್ಲದ್ದು, ಅಂದುಕೊಂಡು "ಏನಾಯ್ತೋ ವಿವರಿಸಿ ಹೇಳು" ಅಂತ ಕೇಳಿದೆ. ಅವ ಶುರು ಮಾಡಿದ "ನೋಡೋ, ಕಾಲೇಜ್ ದಿನಗಳಲ್ಲಿ, ನಾವೆಲ್ಲಾ ಕ್ಲಾಸ್‌ಗೆ ಚಕ್ಕರ್ ಹೊಡೆದು ಹೆನ್ರಿಫಾಂಡ ಚಿತ್ರಗಳನ್ನ ನೋಡುಕ್ಕೆ ಹೋಗ್ತಿರ್ಲಿಲ್ವೇ. ಅವನ "ವಾರ್‌ಎಂಡ್‌ಪೀಸ್" "ವಾರ್ಲಾಕ್" ಈವತ್ತಿಗೂ ಕಣ್ಣಿಗೆ ಕಟ್ಟಿದ ಹಾಗಿದೆ. ಅವನ ಮಗಳು ಜೇನ್ ನಟಿಸಿದ ಚಿತ್ರಗಳೂ ಅಷ್ಟೇ ಚೆನ್ನಾಗಿದ್ವು. ಬ್ಯೂಟಿವಿತ್ ಬ್ರೈನ್ಸ್ ಅಂದ್ರೆ ಅವಳು ನೋಡು. ಏನು ಟ್ಯಾಲೆಂಟ್, ಎಂತಹ ಅಂಗ ಸೌಷ್ಟವ. ಎಷ್ಟು ಚೆನ್ನಾಗಿ ಮಾತಾಡ್ತಿದ್ಲೂ ಏನು ಕತೆ. ಅವಳು ಮನೆ ಪಕ್ಕದಲ್ಲೇ ಇದ್ದಿದ್ರೆ ಎಷ್ಟು ಚೆನ್ನಾಗಿರ್ತಿತ್ತು ಅಂತ ಕನಸು ಕಟ್ಟಿದ್ದೇ ಕಟ್ಟಿದ್ದು. ಅದಾಗಿ ಎಷ್ಟೊ ವರ್ಷ ಆಯ್ತು. ಈಗ ಒಂದು ವಾರದಿಂದ ನಮ್ಮನೇ ಪಕ್ಕದಲ್ಲೆ ವಕ್ರಿಸಿ ಬಿಟ್ಟಿದ್ದಾಳೆ. ಬೆಳಗಾದರೆ ಅವಳಿಂದಲೇ ಸುಪ್ರಭಾತ ನನಗೆ" ಅಂತ ಹೇಳಿ ವಿಮನಸ್ಕನಾದ. ಹಾಲೀವುಡ್ ನಟಿ ಮಲ್ಲೇಶ್ವರಕ್ಕೆ ಬರೋಣಾಂದ್ರೇನೂ ಅಂದ್ಕೊಂಡು "ಹಾಲೀವುಡ್ ಬಿಟ್ಟು ನೀರಿಲ್ಲದ ಮಲ್ಲೇಶ್ವರಕ್ಕೆ ಯಾಕೆ ಬರ್‍ತಾಳೆ. ಅವಳಿಗೆ ಮಲ್ಲೇಶ್ವರ ಅಷ್ಟೊಂದು Fond ಆ ?" ಅಂತ ಕೆಟ್ಟಪನ್ ಮಾಡಿದೆ. "ಹಾಗಲ್ವೊ ! ನಮ್ಮ ಪಕ್ಕದ ಮನೆಯಾಕೆ, ಈಚೆಗೆ ಅಮೇರಿಕಾಕ್ಕೆ ಮಗಳ ಮನೆಗೆ ಹೋಗಿ ಬಂದ್ರು, ಬರ್‍ತಾ ಜೇನ್ ಫಾಂಡ ವರ್ಕ್ ಔಟ್ ಅಂತ ಜೇನ್ ಫಾಂಡಾಳ ಟೇಪ್ ತಂದ್ಬಿಟ್ಟಿದ್ದಾರೆ ವ್ಯಾಯಾಮ ಮಾಡಿಸೋಕೆ. ಬೆಳಗಾದರೆ, ಸುತ್ತ ಮುತ್ತಣ, ಗುಜ್ಜಾನೇ ಮರಿಗಳೆಲ್ಲಾ ಹೊರಡುತ್ವೆ ಅವರ ಮನೇಗೆ. ನಾನು ಏಳಕ್ಕಿಲ್ಲ, one, two, spread your legs out, that's right ಅಂತ ಕೂಗ್ತಿರ್‍ತಾಳೆ ಜೇನ್ ಫಾಂಡ. ತಾರುಣ್ಯದ ಕನಸುಗಳೆಲ್ಲಾ ಎಂದಿಗೂ ಹಸಿರು ಅಂತ ಯಾರೋ ಹೇಳಿದ ಜ್ಞಾಪಕ. ನನ್ನ ಮಟ್ಟಿಗೆ ಎಲ್ಲಾ ಭಗ್ನ ಆಯ್ತು. ಅವಳ ಧ್ವನಿ ಕೇಳಿದ್ರೇ ಮೈ ಎಲ್ಲಾ ಉರಿಯುತ್ತೆ" ಅಂತ ಪ್ರಲಾಪಿಸಿದ.

ನಾನು ಬದುಕಿದೇ ಅಂದ್ಕೊಂಡೆ, ಯಾಕೇಂದ್ರೆ ನನ್ನ ಕನಸಿನ ರಾಣಿ ಷಿರ್ಲ್ಲಿ ಮೆಕ್ಲೀನ್ !

———

# ಓ. ಟಿ. ಮಹಿಮೆ

—ಲೀಲಾ ಮಿರ್ಲೆ

---

ಮೊನ್ನೆ ವಿವೇಕನ ಮನೆಗೆ ಹೋಗಿದ್ದೆವು. ವಿವೇಕ ಕಸುಬಿನಲ್ಲಿ ಎಂಜಿನಿಯರ್, ಹವ್ಯಾಸಿ ಚಿತ್ರಕಾರ. ತಿಂಡಿ, ಕಾಫಿ ಎಲ್ಲಾ ಆದ ನಂತರ ನಮ್ಮವರು, 'ವಿವೇಕ, ಈಚೆಗೆ ಚಿತ್ರಗಳೇನಾದರೂ ಬರಿದಿದ್ದರೆ ತೋರಿಸೋ' ಎಂದ್ರು. ತಂದು ತೋರಿಸ್ತೀನಿ ತಾಳಿ, ಓ. ಟಿ. ರೂಮಲ್ಲಿದೆ' ಎಂದ.

ಏನಿದು ಓ. ಟಿ. ರೂಮು ಅಂತ ನಮಗೆ ಅರ್ಥವಾಗಲಿಲ್ಲ. ನನಗೆ ತಿಳಿದ ಪ್ರಕಾರ ಓ. ಟಿ. ಎಂದರೆ 'ಆಪರೇಶನ್ ಥಿಯೇಟರ್' ಇವನು ಡಾಕ್ಟರಲ್ಲ, ಹಾಗೂ ಮನೆಯಲ್ಲಿ ಯಾರು ಓ. ಟಿ. ಇಟ್ಕೊತಾರೆ, ಅರ್ಥವಾಗಲಿಲ್ಲ.

'ಓ. ಟಿ. ರೂಂ ಅಂದ್ರೇನು' ಅಂದ್ರು ಇವರು.

'ಅಯ್ಯೋ ಅದಾ, ಛೆ, ಇನ್ನಮೇಲೆ ಹುಷಾರಾಗಿ ಮಾತಾಡಬೇಕು. ಆದ್ರೆ ನಿನ್ನ ಹತ್ತಿರ ಹೇಳಕ್ಕೇನು ಮನೆ ತುಂಬಾ ಇಕ್ಕಟ್ಟು ಅಂತ, ಕಾಂಪೌಂಡಲ್ಲಿ ಇನ್ನೊಂದು ರೂಂ ಕಟ್ಟಿದೆವು. ಬರೀ ಓವರ್ ಟೈಂ ಹಣದಲ್ಲಿ ಅದನ್ನ ಕಟ್ಟಿದ್ದರಿಂದ, ಅದಕ್ಕೆ ಆ ಹೆಸರು ನಿಂತುಬಿಟ್ಟಿದೆ' ಅಂದ.

ಬುದ್ಧನಿಗೆ ಬೋಧಿವೃಕ್ಷದ ಕೆಳಗೆ ಜ್ಞಾನೋದಯವಾದ ಹಾಗೆ ನನಗೆ ಒಂಥರ ಜ್ಞಾನೋದಯವಾಯಿತು. ದೇವರಿದ್ದಾನೆ ಎನ್ನುವುದು ಖಚಿತವಾಯಿತು. ಈ ಹಣದ ಉಬ್ಬರದ ಕಾಲದಲ್ಲಿ ಎಷ್ಟು ಸಂಬಳ ಬಂದ್ರೂ ಸಾಲದು. ಭಗವಂತ ಓವರ್ ಟೈಂ ಸೃಷ್ಟಿಸಿರುವುದೇ ಸಾಧು ಜನರ ಉದ್ಧಾರಕ್ಕೆಂದು ತಿಳಿಯಿತು.

ಇದಕ್ಕೇ ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆ ಎನ್ನುವುದು. ಆಫೀಸಿನ ಕೆಲಸದಲ್ಲಿ ಓ. ಟಿ. ಸೌಕರ್ಯ ಇದ್ದರೆ, ಹುಲ್ಲು ಒಣಗಿರದೆ, fresh ಆಗಿ ಹಸಿರಾಗಿರುತ್ತೆ. ಅದು ಹಸುವಿನ ಅದೃಷ್ಟ !

ಇದಾದ ಕೆಲವು ವಾರಗಳ ನಂತರ ಸೀತಾ ಸಿಕ್ಕಳು ಯಾವುದೊ ಮದುವೆಯ ಮನೆಯಲ್ಲಿ. ಸೀತಾ ಸಾವಿರ ರೂಪಾಯಿ ಸಂಬಳ ಬರೊ ಕೆಲಸದಲ್ಲಿದ್ದಾಳೆ. ಗಂಡನೂ ಒಳ್ಳೆಯ ಕೆಲಸದಲ್ಲಿರೊದ್ರಿಂದ, ಇವಳ ಸಂಪಾದನೆ ಇವಳಿಗೆ ಪಾಕೆಟ್ ಮನಿ ಲೆಕ್ಕ.

ಅದೂ ಇದೂ ಮಾತಾಡ್ತಾ, ಕೆಲಸ ಹೇಗಿದೆ ಎಂದೆ. 'ದಿವನಾಗಿದೆ, ಆದ್ರೆ ಮನೆಗೆ ಬರೋದು ಸ್ವಲ್ಪ ಹೊತ್ತಾಗುತೆ' ಎಂದ್ಲು.

'ಆಫೀಸ್ ಹತ್ರಾನೆ ಮನೆ ಅಲ್ವೆ, ಮತ್ಯಾಕ್ ಲೇಟು' ಎಂದೆ.

'ಯಾಕ್ ಲೇಟು ಅಂದ್ರೆ, ಕೆಲಸದ ವೇಳೆ ಆದ ಮೇಲೂ ಕೆಲಸ ಮಾಡ್ತಿನಿ. ಅದಕ್ಕೆ ಓವರ್ ಟೈಂ ಅಂತಾರೆ. ಓವರ್ ಟೈಂ ಮಾಡಿದರೆ ಎಕ್ಸ್ಟ್ರಾ ಹಣ ಬರುತ್ತೆ' ಎಂದ್ಲು. ಲಕ್ಷ್ಮಿಯ ಕಂಪನಿ ಎಷ್ಟಿದ್ದರೂ ಬೇಕಲ್ಲವೆ !

ಸರ್ವ ವ್ಯಾಪಿಯಾಗಿರುವ ಈ ಓವರ್ ಟೈಂ ಬಗ್ಗೆ ಕೆಲವು ಸಂದೇಹಗಳಿದ್ದವು. ನನಗೆ. ಅಲ್ಲಾ ಕೆಲಸ 5 ಗಂಟೆಗೇ ಮುಗಿದು ಹೋದ್ರೆ, ಆಗ ಓ. ಟಿ. ಹ್ಯಾಗ್ ಮಾಡಕ್ಕಾಗುತ್ತೇ' ಎಂದೆ.

'ಅದೇ ಇರೋದು, ಕೆಲಸದ ವೇಳೆಯಲ್ಲಿ ಆತುರಪಡಬಾರದು. ಸಾವಧಾನ ವಾಗಿ ಕೆಲಸ ಮಾಡಬೇಕು. ಟೆಲಿಫೋನ್ ಸಂಭಾಷಣೆಗಳು, ಅಕ್ಕ ಪಕ್ಕದವರ ಹತ್ತಿರ ಮಾತು ಕತೆ, ಕ್ರಾಸ್ ವರ್ಡ್ Puzzle, ಕಾದಂಬರಿ, ಕಾಫಿ ಇವುಗಳ ಮಧ್ಯೆ ಮಧ್ಯೆ ಕೆಲಸ ಮಾಡಿದರೆ, ಖಂಡಿತ 5 ಗಂಟೆಗೆ ಕೆಲಸ ಮುಗಿಯಲ್ಲಾ. ನೋಡು, ಓ. ಟಿ. ಮಾಡಿದ್ದರ result ಇದು ಅಂತ ಕೈಗೆ ಹಾಕಿಕೊಂಡಿದ್ದ ಹೊಸ ಚಿನ್ನದ ಬಳೆಯನ್ನು ತೋರಿಸಿದಳು !

ಬುದ್ಧನಿಗೆ ಒಂದೇ ಸಲ ಜ್ಞಾನೋದಯವಾದರೆ, ನನಗೆ ಎರಡು ಸಲ ಆಯಿತು !

ಅಂದು ಮನೆಗೆ ಬಂದ ಮೇಲೆ ಧೀರ್ಘಾಲೋಚನೆ ಮಾಡಿದೆ. ಜನ ಎಷ್ಟು ವಿವೇಕಿಗಳಾಗಿ ತಮ್ಮನ್ನು ತಾವು ನೋಡಿಕೊಳ್ಳುತ್ತಾರೆ. ನಾವ್ಯಾಕ್ ಹೀಗಿದೀವಿ ಅಂತ ದುಃಖವಾಯಿತು. ನಮ್ಮವರಿಗೆ ಓ. ಟಿ. ಮಾಡಿ ಅಂತ ಹೇಳೊ ಹಾಗೇ ಇಲ್ಲ, ಇವರು ಡಾಕ್ಟರು. ಈ ಖಾಸಗೀ ವೈದ್ಯರಿಗೆ 'ಕಾಲ'ನ ಪರಿಚಯ ಚೆನ್ನಾಗಿರುತ್ತದೆಯೇ

ವಿನಹ ಕಾಲದ ಲೆಕ್ಕವೇ ಇಲ್ಲ! ಈ ಕಸುಬಿನ ವೈಶಿಷ್ಟ್ಯವೇನೆಂದರೆ ಜಾಸ್ತಿ ದುಡಿದಷ್ಟೂ ಹಣ ಕಮ್ಮಿ ಬರುತ್ತದೆ. ಲಕ್ಷ್ಮೀಗೂ ಡಾಕ್ಟರ್ ಕಂಡರೆ ಭಯವೇನೊ! ಅವರ ಕಣ್ಣಿಗೆ ಬೀಳುವುದೇ ಇಲ್ಲ!

ಇದೇ ಓವರ್ ಟೈಂ ಗುಂಗಿನಲ್ಲಿದ್ದಾಗ, ಒಂದು ದಿನ ನಮ್ಮ ಕೆಲಸದ ಗಂಗಮ್ಮ ನಾಲ್ಕು ದಿನ ರಜ ಬೇಕು. ಅತ್ತಿಗೆ ಮಗಳ ಮದುವೆ, ಮಕ್ಕಳನ್ನೆಲ್ಲಾ ಕರೆದುಕೊಂಡು ಹಳ್ಳಿಗೆ ಹೋಗಬೇಕು, ಅಂದ್ಲು. ಸದಾ ಕಾರ್ಪಣ್ಯಗಳಲ್ಲಿ ಮುಳು ಗಿರುತ್ತಿದ್ದ ಇವಳು ರಜ ಕೇಳಿದಳೆ ವಿನಹ ಅಡ್ವಾನ್ಸ್ ಕೇಳಲಿಲ್ಲ, ಆಶ್ಚರ್ಯವಾಯಿತು. ಗಂಗಮ್ಮ ಮುಂದುವರಿಸಿದಳು "ದೇವ್ರು ಕಣ್ಣ್ ಬಿಟ್ಟವ್ವನೆ ಕಣ್ರವ್ವಾ, ಕೈಯಲ್ಲಿ ಒಸಿ ಕಾಸೈತೆ. ನಮ್ ಯಜಮಾನ ಒಸಾ ಕೆಲಸಕ್ಕೆ ಸೇರಿದ್ ಮ್ಯಾಗೆ ಎಲ್ಲಾ ಸುದ್ರಾರಿಸೈತೆ. ಅಳೀ ಕೆಲಸದಾಗೆ ಬರಿ ಒಣಸಂಬ್ಳ ಕೊಡ್ತಿದ್ರು. ಈ ಒಸ ಜಾಗ್‌ದಾಗೆ ಎಲ್ಲಾ ತುಂಬಾ ಶಿಷ್ಟಮ್ಮ. 5 ಗಂಟೆ ಮ್ಯಾಗೆ ಕೆಲಸ ಮಾಡಿದ್ನೆ ಕೈ ತುಂಬಾ ಕಾಸ್ ಕೊಡ್ತಾರೆ' ಅಂದ್ಲು.

'ಹಾಗಿದ್ರೆ ನಿನ್ನ ಗಂಡ ಮನೆಗೆ ಬರೋದು ಹೊತ್ತಾಗತ್ತೆ" ಎಂದೆ.

"ಯಂತಾದು ಇಲ್ಲಾ ಕಣ್ರವ್ವ. ಆ ಆಫೀಸಪ್ಪನ ಕೈ ಬೆಚ್ಚಗೆ ಮಾಡವ್ನೆ. ಓ. ಟಿ. ಆಕು ಅಂದ್ರೆ ಆಕ್‌ತಾನೆ' ಎಂದ್ಲು.

ಪರವಾಗಿಲ್ಲ, ವಿವೇಕ, ಸೀತಾ ಇವುರುಗಳಿಗಿಂತ ಜಾಸ್ತಿ evolve ಆಗಿದಾನೆ ಗಂಗಮ್ಮನ ಗಂಡ ಅನ್ನಿಸ್ತು.

ಓಟಿಮಯಮಿದಂ ಸರ್ವಂ! ಓ. ಟಿ. ಯ ಬಗ್ಗೆ ನನಗೆ ಭಕ್ತಿ, ಗೌರವ ಇಮ್ಮಡಿಯಾಯಿತು. ಈ ಎರಡು ಅಕ್ಷರಗಳ ಪ್ರಭಾವದಿಂದ ಭಾರತದ ಆದ್ಯಂತ ಎಷ್ಟು ಜನಕ್ಕೆ ಸುಖ, ಶಾಂತಿ ನೆಮ್ಮದಿ!

ಬೇಗ ಕೆಲಸ ಮಾಡಿ ಆಫೀಸು, ದೇಶ ಇವುಗಳನ್ನು ಉದ್ಧಾರ ಮಾಡುವ ಬದಲು, ಸಾವಧಾನವಾಗಿ ಕೆಲಸ ಮುಂದುವರಿಸಿ ನಮ್ಮನ್ನು ನಾವು ಉದ್ಧಾರ ಮಾಡಿಕೊಳ್ಳುವುದು ವಿವೇಕವಲ್ಲವೇ? 'ಉದ್ಧರೇತ್ ಆತ್ಮ ನಾತ್ಮಾನಂ'— ಶ್ರೀ ಕೃಷ್ಣನ ಅನಿಸಿಕೆಯೂ ಅದೇ ತಾನೆ!

———

# 'ಬಾಳ್ವಿಗೆ ಕನ್ನಡ'

**ಬಿ. ಎಸ್. ಚಂದ್ರಶೇಖರ್**

---

ನಮ್ಮ ಕಾಲೇಜಿನ ಖಾಯಂ ವಿದ್ಯಾರ್ಥಿ ಸಿದ್ರಾಮನ ವಿಚಾರ ನಾನು ಹಿಂದೆಯೇ ಹೇಳಿದ್ದೇನೆ ಅಂತ ಕಾಣುತ್ತೆ. ಮೂರು ವರ್ಷದಲ್ಲಿ ನಮ್ಮಲ್ಲಿ ಶಿಕ್ಷಣ ಮುಗಿಸಬೇಕಾಗಿದ್ದ ಸಿದ್ರಾಮ ಈಗ 15 ವರ್ಷದಿಂದ ಇಲ್ಲೇ ಇದ್ದಾನೆ. ನನ್ನ ಗ್ರಹಚಾರಕ್ಕೆ ಮಾಸ್ಟರುಗಳ ಪೈಕಿ ನನ್ನ ಮೇಲೆ ಅವನಿಗೆ ಹೆಚ್ಚಿನ ಪ್ರೀತಿ. ಸಿದ್ರಾಮ ಪಬ್ಲಿಕ್ ಪರೀಕ್ಷೆಗಳಲ್ಲಿ ಯಾವ ವಿಷಯದಲ್ಲೂ ನೂರಕ್ಕೆ ಹತ್ತಕ್ಕಿಂತ ಹೆಚ್ಚು ನಂಬರ್ ಪಡೆದಿಲ್ಲ ನಿಜ. ಆದರೆ ಸಿದ್ರಾಮ ದಡ್ಡನಲ್ಲ. ಅವನಿಗಿರುವ ಎಕ್ಸ್‌ಟ್ರಾ ಕರಿಕ್ಯುಲರ್ ಕೆಲಸಗಳಿಂದಾಗಿ ಓದಲು ಪುರುಸೊತ್ತು ಸಿಗುವುದಿಲ್ಲ ಅಷ್ಟೆ.

ಮೊನ್ನೆ ಬೆಳಿಗ್ಗೆ ಸಿದ್ರಾಮ ಮನೆಗೆ ಬಂದು 'ಸಾ, ನಾನೊಂದು ಪುಸ್ತಕ ಬರೆಯುವ ಅಂತ' ಎಂದು ತನ್ನ ಹೊಸ ಖಯಾಲಿ ತಿಳಿಸಿದ.

ಸಿದ್ರಾಮನ ಹತ್ತಾರು ಐಲಾಟಗಳನ್ನು ನೋಡಿರುವ ನನಗೆ ಅವನು ಏನು ಮಾಡುತ್ತಾನೆ ಎಂದು ಹೇಳಿದರೂ ಆಶ್ಚರ್ಯವಾಗುವುದಿಲ್ಲ. ಆದರೂ ಸಿದ್ರಾಮನ ಸಾಹಿತ್ಯಾಸಕ್ತಿ ತೀರಾ ಅನಿರೀಕ್ಷಿತ.

'ಸರಿ ಕಣಪ್ಪ ನೀನೂ ಕತೆ ಕಾದಂಬರಿ ಬರಿಯೊಕ್ಕೆ ಷುರುಮಾಡಿದೆ ಅನ್ನು

'ಥತ್ ತಗಿರೀಸಾ. ಈಗ ಜನ ಓದೋದು ಹೆಣಮಕ್ಕಳು ಬರೆದ ಕತೆ ಅಲ್ವ. ಜನಗಳಿಗೆ ಲೈಫ್‌ನಲ್ಲಿ ಉಪಯೋಗ ಆಗೋ ಹಾಗೆ ಕನ್ನಡ ಹೇಗೆ ಬಳಸಬಹುದು ಅಂತ ಒಂದು ಪುಸ್ತಕ ಬರೀತಿನಿ. ಒಂಥರಾ ಗ್ರಾಮರ್ ಅಲ್ಲ ಕಾಂಪೋಜಿಷನ್ ಅನ್ನಿಬೇಕಾದರೆ.

'ಇದೇನಯ್ಯ ನಿನಗೆ ಇದ್ದಕ್ಕಿದ್ದ ಹಾಗೆ ಈ ವಿಚಾರದಲ್ಲಿ ಆಸಕ್ತಿ ? ಹೇಗೆ ಬಂತು ಇದಕ್ಕೆ ಸ್ಫೂರ್ತಿ ?'

'ನಮ್ಮಕ್ಕನ ಮಗ ಹೈಸ್ಕೂಲಿನಾಗೆ ಓದ್ತಾನೆ. ಅವನು ನಿನ್ನೆ ಮಾವ ಇದೊಂದು ಹೋಂವರ್ಕ್ ಕೊಟ್ಟಿದ್ದಾರೆ. ವಸಿ ಮಾಡಿಕೊಡು ಅಂತ ಕನ್ನಡ

ಕಾಂಪೋಜಿಷನ್ ಪುಸ್ತಕ ತಂದ. ಪ್ರಶ್ನೆ ಏನಪ್ಪ ಅಂದರೆ ಬೇಸಿಗೆ ರಜದಲ್ಲಿ ನಾನು ಮಾಡಿದ ಪ್ರವಾಸ ಅಂತ ಎರಡು ಪೇಜ್ ಬರಿ ಅಂತ'

'ಅರರೆ ನಾನು ಸ್ಕೂಲಿನಲ್ಲಿ ಓದುತ್ತಿದ್ದಾಗಲೂ ನಮ್ಮ ಪರೀಕ್ಷೆಲೂ ಇದನ್ನೇ ಕೊಟ್ಟಿದ್ದರು.

'ಅದೆ ನೋಡಿ ಸಾ. ಈಗ ನೀವು ಸ್ಕೂಲ್ ಬಿಟ್ಟು 25 ವರ್ಷ ಆಗಿರಬೇಕು. ಅದೇ ಹಳೇ ಪ್ರಶ್ನೇನೆ ಕೇಳುತ್ತಾರೆ. ಹೀಗಾದರೆ ಹೇಗೆ ಸಾ ನಮ್ಮ ದೇಶ ಮುಂದಕ್ಕೆ ಬರೋದು ? ಅಂದಹಾಗೆ ನೀವು ಏನು ಉತ್ತರ ಬರಿದಿದ್ದಿರಿ ಒಂದು ಚೂರು ಹೇಳಿ'

'ನಿಜ ಹೇಳಬೇಕು ಅಂದರೆ ನಾನು ಆ ವರ್ಷ ಬೇಸಿಗೆ ರಜದಲ್ಲಿ ಊರು ಬಿಟ್ಟು ಹೋದದ್ದು ತಾಲ್ಲೂಕು ಕೇಂದ್ರದಲ್ಲಿ 'ಮರ್ಮವೀರನ್' ಸಿನಿಮಾ ನೋಡುಕ್ಕೆ ಒಂದು ದಿನ ಮಾತ್ರ. ಇದು ಬರೆದರೆ ನಂಬರ್ ಕೊಡುಲ್ಲ ಅಂತ ಮೈಸೂರು, ಬೃಂದಾವನ್ ಅಂತೇನೋ ಬೂಸಿ ಬಿಟ್ಟಿದ್ದೆ ಅಂತ ಜ್ಞಾಪಕ'

'ನೋಡಿ ಎಂತ ಯೂಸ್‌ಲೆಸ್ ವಿಷಯ. ಹೋಗಲಿ ನೀವು ಬೇರೆ ಊರಿಗೆ ಹೋಗಿ ಬಂದಿದ್ದಿರಿ ಅಂತಿಟ್ಟುಕೊಂಡರೂ ಅದರ ವಿಚಾರ ಹೇಳುಕ್ಕೆ ಹೋಗಿದ್ದರೆ ನಿಮ್ಮ ಮಾತು ಯಾರಾದರೂ ಕೇಳುತಿದ್ದರೆ ?'

'ನೀನು ಹೇಳೋದು ನಿಜ. ನಾನು ನಾರ್ತ್ ಇಂಡಿಯಾ ಟೂರ್ ಹೋಗಿದ್ದ ನಲ್ಲ ಅದರ ವಿಚಾರ ಯಾರ ಹತ್ತಿರವಾದರೂ ಹೇಳುಕ್ಕೆ ಹೋದರೆ ಅವರು ನನ್ನ ಮಾತು ಕೇಳೋ ಬದಲು ಅವರು ಮಥುರೈಲಿ ರೈಲು ತಪ್ಪಿಸಿಕೊಂಡಿದ್ದು, ಬೊಂಬಾಯಿಯಲ್ಲಿ ಪರ್ಸ್ ಕಳಕೊಂಡಿದ್ದು ಪ್ರಾರಂಭ ಮಾಡ್ತಾರೆ.

'ಸ್ಕೂಲಲ್ಲಿ ಕನ್ನಡ ಹೇಳಿ ಕೊಡೋರಿಗೆ ಇದು ಗೊತ್ತಿರಬೇಡವೇ. ಈಗ ಫಾರಿನ್‌ಗೆ ಹೋಗಿದ್ದೆ, ಲಂಡನ್‌ನಲ್ಲಿ ಅದು ನ್ಯೂಯಾರ್ಕ್‌ನಲ್ಲಿ ಇದು ಅಂತ ಪ್ರಾರಂಭಿಸಿದರೆ ಮುಚ್ಕೊಳೊ ನಮಗೆಲ್ಲಾ ಗೊತ್ತು ಅಂತಾರೆ. ಅಂತದರಲ್ಲಿ ಇಂತಹ ಕೆಲಸಕ್ಕೆ ಬಾರದ ವಿಚಾರ ಏಕೆ ಬೇಕು ? ಪುಸ್ತಕ ಪ್ರಾಕ್ಟಿಕಲ್ ಆಗಿರಬೇಕು ಸಾ. ಪಿಎಂ, ಸಿಎಂ. ಎಡ್ಯುಕೇಷನ್ ಮಿನಿಸ್ಟರ್ ಎಲ್ಲಾ ಹೇಳ್ತಾರೆ ಪಾಠಗಳು ಲೈಫ್‌ಗೆ ಸಹಾಯ ಮಾಡ್ಬೇಕು ಅಂತ, ನೀವು ಅವತ್ತು ಹೇಳಿದ್ದಿರಲ್ಲ'

'ಬಾಳ್ವಿಗೆ ಶಿಕ್ಷಣ. ಶಿಕ್ಷಣದ ಗುರಿ ಜನರ ತಕ್ಷಣದ ಅಗತ್ಯಗಳನ್ನು ಪೂರೈಸು ವುದು'

'ಅದೇನೋಡಿ ಮಂತ್ರಿಗಳು ಹೇಳೋದೊಂದು ಪುಸ್ತಕ ಬರೆದೋರು ಮಾಡೋದು ಇನ್ನೊಂದು. ಅದೇ ನನ್ನಕ್ಕನ ಮಗನ ಪುಸ್ತಕದಲ್ಲಿ ಇನ್ನೊಂದು ಪಾಠ. ಈ ಕೆಳಕಂಡ ಪುಸ್ತಕಗಳನ್ನು ವಿಪಿಪಿ ಮೂಲಕ ಕಳುಹಿಸಿ ಎಂದು ಪುಸ್ತಕದ ಅಂಗಡಿಗೆ ಒಂದು ಕಾಗದ ಬರಿ ಅಂತ. ಯಾವೋನಾದರೂ ಮುಟ್ಠಾಳ ಹೀಗೆ ದುಡ್ಡು ಕೊಡುತ್ತೀನಿ ಪುಸ್ತಕ ಕಳುಹಿಸಿ ಅಂತ ಕೇಳಿರೋದನ್ನ ನೀವು ನೋಡಿದಿರಾ?'

ನಾನೇ ಒಂದೊಂದು ಸಲ ತರಿಸಿಕೊಂಡಿದ್ದೇನೆ ಎಂದು ಹೇಳಿ ಇವನ ದೃಷ್ಟಿ ಯಲ್ಲಿ ಅತಿದೊಡ್ಡ ಮುಟ್ಠಾಳನಾಗಲು ಮನಸ್ಸು ಬರಲಿಲ್ಲ. ಅಲ್ಲದೆ ಸಿದ್ರಾಮನ ವಾದದಲ್ಲಿ ಹುರುಳಿತ್ತು.

'ಈ ಪುಸ್ತಕ ನೋಡಿದ ಮೇಲೆ ನನಗೆ ಜನಗಳಿಗೆ ನಿಜವಾಗಿಯೂ ಉಪ ಯೋಗ ಆಗೋ ವಿಷಯಗಳಲ್ಲಿ ಭಾಷೆ ಬಳಸೋದನ್ನ ಹೇಳಿಕೊಡಬೇಕು ಅಂತ ಅನ್ನಿಸತು. ನೀವೇ ಹೇಳಿ ಸಾ ಜನ ಏಕೆ ಭಾಷೆ ಕಲೀತಾರೆ?'

'ಅಪ್ಪ ನೀನು ಕೇಳುತ್ತಿರುವುದು ಬಹಳ ದೊಡ್ಡ ಪ್ರಶ್ನೆ. ಸೈಕಾಲಜಿ. ಭಾಷಾ ಶಾಸ್ತ್ರ, ಕಮ್ಯುನಿಕೇಷನ್ ಪ್ರೊಫೇಸರ್‌ಗಳು ಉತ್ತರ ಕೊಡಬಹುದು. ನಾನು ನೋಡಿರೋ ಹಾಗೆ ನನ್ನ ಮಗಳು ಟಿವಿ ಸೀರಿಯಲ್ಸ್ ಅರ್ಥ ಮಾಡ್ಕೊಬೇಕು ಅಂತ ಹಿಂದಿ ಕಲಿತಿದಾಳೆ. ಎದುರು ಮನೇಲಿರೋ ಸಿಂಧಿ ಹೆಂಗಸು, ಅವರ ಮನೆ ಕೆಲಸ ದೋಳನ್ನ ಅವಳಿಗೆ ಅರ್ಥವಾಗೋ ಹಾಗೆ ಬೈಯ್ಯಬೇಕು ಅಂತ ನನ್ನ ಹೆಂಡತಿ ಹತ್ತಿರ ಕನ್ನಡ ಹೇಳಿಸಿಕೊಳ್ಳುತ್ತಿದ್ದಾಳೆ'

'ಬೈಯ್ಯೋದಿಕ್ಕೆ ಭಾಷೆ ಬರಬೇಕು ಅಂದ್ರಲ್ಲ. ಅದು ಅಸಲಿ ಪಾಯಿಂಟ್. ಈಗ ಹುಡುಗರು ಕೋಪ ಬಂದರೆ ಏನು ಮಾಡ್ತಾರೆ – ರ್‍ಯಾಸ್ಕಲ್, ಸುವ್ವರ್ ಅಂತ ಬೇರೆ ಭಾಷೇಲಿ ಬೈತಾರೆ. ಕನ್ನಡದಲ್ಲೂ ಬೈಗುಳ ಇದೆ. ನಮ್ಮ ಭಾಷೆ ಕನ್ನಡ ನಮ್ಮ ಬದುಕು ಕನ್ನಡ ಆದರೆ ನಮ್ಮ ಬೈಗುಳವು ಕನ್ನಡ ಆಗಬೇಕು ಅಂತ ನಾನು ಹೇಳ್ತೀನಿ. ಕನ್ನಡದಲ್ಲಿ ಎಷ್ಟು ಪವರ್‌ಫುಲ್ ಬೈಗುಳ ಇದೆ ಉದಾ ಹರಣೆಗೆ.........?'

'ಬೇಡ ಬೇಡ. ಮನೇಲಿ ಹೆಂಗಸರು ಮಕ್ಕಳು ಇದಾರೆ. ಅಂದರೆ ನಿನ್ನ ಪುಸ್ತಕದಲ್ಲಿ ವಿಷಯು ಬೈಯ್ಯೋದು ಹೇಗೆ ಅಂತ ಅನ್ನು

'ಛೆ ಛೆ ಅದೊಂದು ಸಣ್ಣ ಚಾಪ್ಟರ್. ಎಲ್ಲೋ ಕೊನೇಲಿ ಬರುತ್ತೆ ನಮ್ಮಪ್ಪ ನಾನು ಸ್ಕೂಲಿಗೆ ಸೇರಿದ ದಿನ ಒಂದು ಮಾತು ಹೇಳಿದ್ದ. ಅದು ಇನ್ನೂ ಜ್ಞಾಪಕ ದಲ್ಲಿದೆ. ನನ್ನ ಪುಸ್ತಕದಲ್ಲಿ ಅದನ್ನು ಉಪಯೋಗಿಸ್ಕೋತಿನಿ'

'ಏನಪ್ಪ ನಿನ್ನ ಆ ಪಿತೃವಾಕ್ಯ'

'ಮಗನೆ, ಅಕ್ಷರ ಬರಿಯೋದು ಚೆನ್ನಾಗಿ ಕಲಿ. ಮುಂದೆ ಮೂಕರ್ಜಿ ನಿನ್ನ ಕೈಲೇ ಬರೆಸ್ತೀನಿ ಅಂದಿದ್ದ. ಅದು ನೋಡಿಸಾ ಭಾಷೆ ಪ್ರಾಕ್ಟಿಕಲ್ ಉಪಯೋಗ. ಈಗ ಆಡಳಿತ ಭಾಷೆ ಕನ್ನಡ ಆಗಿರೋವಾಗ ಮೂಕರ್ಜಿ ಬರಿಯೋದು ಹೇಗೆ ಅಂತ ಒಂದು ಪುಸ್ತಕದಲ್ಲಾದರೂ ಹೇಳಿ ಕೊಟ್ಟಿದಾರಾ ಸಾ ? ನಿಮಗೆ ಗೊತ್ತಿರಬೇಕಲ್ಲ ನಮ್ಮ ಎಂಎಲ್ಎ ರುದ್ರಪ್ಪ ಈಗ ಫೇಮಸ್ ಆಗಿದಾನಲ್ಲ. ಅವನು ಮುಂದಕ್ಕೆ ಬಂದಿದ್ದೆ ಅವನ ಭಾಷ ಶಕ್ತಿಯಿಂದ ಅಂತ'

'ನನಗೇನು ಗೊತ್ತಿಲ್ಲವಲ್ಲ. ಏನು ರುದ್ರಪ್ಪ ಸಾಹಿತೀನೋ ಅಥವಾ ಚೆನ್ನಾಗಿ ಭಾಷಣ ಮಾಡ್ತಾನೋ?'

'ಸಾಹಿತಿ ಆಗಿದ್ದರೆ ಪುಸ್ತಕ ಖರ್ಚಾಗಲಿಲ್ಲ ಅಂತ ಅಳುತಾ ಕೂತಿರುತ್ತಿದ್ದ. ಬೆಂಗಳೂರಿನಲ್ಲಿ ನಾಲ್ಕು ಬಂಗಲೆ ಹೇಗೆ ಮಾಡ್ತಿದ್ದ. ನಮ್ಮ ರುದ್ರಪ್ಪ ಪಾಲಿಟಿಕ್ಸ್ ಪ್ರಾರಂಭಿಸಿದ್ದು ಮೂಕರ್ಜಿ ಬರೆಯೋದರಿಂದ. ಏನು ಭಾಷೆ, ಏನು ಬರಹ. ಇವನ ಅರ್ಜಿಗಳು ಅಂದರೆ ಅಫೀಸರ್‌ಗಳೂ ನಡಗೋರಂತೆ. ಮುಂದೆ ಇನ್ನು ಏನೇನೋ ಮಾಡ್ದ ಬಿಡಿ. ನನ್ನ ಪುಸ್ತಕದಲ್ಲಿ ಒಂದಿಷ್ಟು ಹೈಕ್ಲಾಸ್ ಮೂಕರ್ಜಿ ಮಾದರಿ ಕೊಡೋಣ ಅಂತ. ಜನಗಳಿಗೆ ಉಪಕಾರ ಆಗುತ್ತೆ. ಆಮೇಲೆ ನಮ್ಮ ಕಾಲೇಜಿನಲ್ಲೇ ಇದಾನಲ್ಲ ಸಣ್ಣಪ್ಪ ಅವನು ಫೂಲ್ ಆಗಿದ್ದು ನಿಮಗೂ ಗೊತ್ತಿರಬೇಕಲ್ಲ'

'ಯಾವ ಸಣ್ಣಪ್ಪನಯ್ಯ? ನನಗೆ ಕಾಲೇಜ್ ಗಾಸಿಪ್ ಸ್ವಲ್ಪನೂ ಆಸಕ್ತಿ ಇಲ್ಲ'

'ಈಗಿನ ಕಾಲದ ಶಿಕ್ಷಣ ಹೇಗೆ ಯೂಸ್‌ಲೆಸ್ ಅನ್ನುಕ್ಕೆ ಒಳ್ಳೆ ಉದಾಹರಣೆ ಸಾ. ಅವನದ್ದು. ಸಣ್ಣಪ್ಪ ಸೆಕೆಂಡ್‌ಯಿಯರ್ ಸ್ಟೂಡೆಂಟ್ ಅವನೂ ಅವನ ಫ್ರೆಂಡ್ ಯಾವುದೋ ಸಿನಿಮಾ ನೋಡಿದರಂತೆ, ಅಲ್ಲಿ ಯಾರೋನೋ ಕಿಡ್‌ನ್ಯಾಪ್ ಮಾಡಿ

ಲಕ್ಷಾಂತರ ರೂಪಾಯಿ ಹೊಡಿತಾನೆ, ಇವರು ಅದೇ ಪ್ಲಾನ್ ಮಾಡಿದರು. ಯಾವುದೋ ಸಾಹುಕಾರನ ಹುಡುಗನ್ನೂ ಹಿಡಕೊಂಡರು. ಪ್ಲಾನ್ ಸಕ್ಸೆಸ್ ಆಗ ಬೇಕಾಗಿತ್ತು. ಆದರೆ ಸ್ಕೂಲಿನಲ್ಲಿ ಕನ್ನಡ ಶಿಕ್ಷಣ ವೀಕ್. ಪ್ಲಾನ್ ಪುಸ್ ಆಯ್ತು

'ಏನಯ್ಯ ನೀನು ಹೇಳೋದು. ಅವರ ಸ್ಕೂಲಿನ ಕನ್ನಡ ಮೇಸ್ಟರು ಇವರಿಗೆ ಸರಿಯಾಗಿ ಕಿಡ್‌ನ್ಯಾಪ್ ಮಾಡೋದು ಹೇಗೆ ಅಂತ ಹೇಳಿ ಕೊಡಬೇಕಾಗಿತ್ತೆ ?'

'ಅವರ ಸ್ಕೂಲಿನ ಮೇಸ್ಟರು ಕೆಲಸಕ್ಕೆ ಬಾರದ ಲೆಟರ್ ರೈಟಿಂಗ್ ಮಾದರಿ ಹೇಳಿಕೊಟ್ಟಿದ್ದರು. ಜೀವನದಲ್ಲಿ ಫಸ್ಟ್ ಟೈಂ ಸಣ್ಣಪ್ಪ ಲೆಟರ್ ಬರೆಯೋಕ್ಕೆ ಹೋದ. ಶಿಕ್ಷಣ ಕೈಕೊಡ್ತು. ಅದೇ ಕಿಡ್‌ನ್ಯಾಪ್ ಮಾಡಿದ ಮೇಲೆ ಆ ಹುಡುಗ ಅಪ್ಪ ಸಾಹು ಕಾರನಿಗೆ ಲೆಟರ್ ಬರೀಬೇಕಲ್ಲ ಅದು. ಲೆಟರ್ ಬರಿಯೋದು ಹೇಗೆ ಅಂತ ಇವನಿಗೇ ಗೊತ್ತಿಲ್ಲ. ಇವನ ಫ್ರೆಂಡಿಗೂ ಗೊತ್ತಿಲ್ಲ. ಇವನು ತೀರ್ಥರೂಪು ಅಂತ ಬರೀ ಬೇಕು ಅಂದ ಫ್ರೆಂಡ್ ಚಿರಂಜೀವಿ ಅಂತ. ಬರೀಬೇಕು ಅಂತ. ಜಗಳ ಫೈಸಲ್ ಆಗಲೇ ಇಲ್ಲ. ಥತ್‌ತೆಗಿ ಇದ್ಯಾವ ತರಲೆ ಅಂತ ಆ ಹುಡುಗನಿಗೆ ಚಾಕೋಲೇಟ್ ತೆಕೊಟ್ಟು ಮನೆಗೆ ಕಳುಹಿಸಿದರು. ಸಣ್ಣಪ್ಪನ ಸಾಹಸ ಕಾಲೇಜು ಹುಡುಗರಿಗೆಲ್ಲ ತಮಾಷೆ ಮಾಡೋ ವಿಷಯ ಆಯ್ತು. ಅದಕ್ಕೆ ನನ್ನ ಪುಸ್ತಕದಲ್ಲಿ ಇಂತಹ ಸಂದರ್ಭಗಳಿಗೆ ಉಪಯೋಗ ಆಗೋ ಲೆಟರ್ಸ್ ಮಾದರಿ ಕೊಡುತ್ತೇನೆ'

ಸಿದ್ರಾಮನ ಹೊಸ ಯೋಜನೆ ಕೇಳಿದಾಗಲೆಲ್ಲಾ ಏನು ಹೇಳಬೇಕು ಎಂದು ತಿಳಿಯದಂತಾಗುತ್ತದೆ. ಅಂದೂ ಅದೇ ರೀತಿ ಆಯಿತು.

——

## ತಾಳಿ

ಮದುವೆ ದಿನ
ಕುತ್ಗೆ ಸುತ್ತ
ಕಟ್ಟೇ ಬಿಟ್ಟ
ತಾಳಿ ಗುಂಡು ಸರ
ಮಾರ್ನೇ ದಿನ
ತಾಳಿ ಕಿತ್ತು
ಗುಂಡ್ ಹಾಕ್ಕೊತ
ನಡದೇ ಬಿಟ್ಟ ಸರಸರ

—ಎಂ. ಎಸ್. ವ್ಯಾಸರಾವ್

# ಮೂಕ ಯಕ್ಷ

ಒಂದಾನೊಂದು ಕಾಲದಲ್ಲಿ...



















ಮೂಗ ಕಾಡಿಗೆ ಓಡಿದ. ನಿಜವಾಗ್ಲೂ ಸಿಂಹದ ಹಾಲು ಕರೆದ್ನೋ ಇಲ್ವೋ.....


ಅವನು ತಂದ ಬಿಳೀ ದ್ರವ ರಾಣಿ ಖಾಯಿಲೇನ ವಾಸಿಮಾಡಿಬಿಡ್ತು.
ಈಗ ಎಷ್ಟೋ ವಾಸಿ
ಸಿಂಹದ ಹಾಲಂತೆ! ಮಾಟಗಾರ ಅವ್ನು! ಒದ್ದೋಡಿಸಿ!


ಮೂಗ, ಮಾಟಗಾರ ಅನ್ನೋ ಸುದ್ದಿ ಅರಮನೇಲೆಲ್ಲಾ ಹರಡಿತು.
ನಿಜ ಹೇಳಡು! ನೀನು ಮಾಟಗಾರ ತಾನೇ!
ಸುಮ್ಮಿರೋದು ನೋಡು ಮಾಟಗಾರಾನೇ ಇರ್ಬೇಕು. ಕಳ್ಳನ್ಗೆ ಮಾಗ್ರನೇ ಇಲ್ಲ.


ಪ್ರಾಣರಕ್ಷಣೆ ಮಾಡ್ದೆ ನಿಜ. ಆದ್ರೂ.... ವನ್ನಾಡ್ತಿದ್ದೀಯಾ?
ಮರದಿಂದ ಬೀಳ್ತಿದ್ದ ರಾಜಕುಮಾರನ್ನ ಮೂಗ ರಕ್ಷಿಸ್ದ.


ಈಗ ನಾನು ನಿಜ ಹೇಳ್ತೀದು. ನಾನೊಬ್ಬ ಯಕ್ಷ. ಶಾಪದಿಂದ ಈ ಜನ್ಮ ಬಂತು. ಮಾತಾಡ್ದೆ, ಮೂರು ಮನುಷ್ಯರು, ಒಂದು 'ಕುನ್ನ' ಬದುಕ್ಸಿದ್ರೆ ಶಾಪವಿಮೋಚನೆ ಅಂತ ಹೇಳಿದ್ರು
ಈಗ ಅದೆಲ್ಲಾ ಮುಗಿದು ಹಾಗಾಗಿ


ನೀವೇನೂ ಕಳಿಸ್ಬೇಕಾಗಿಲ್ಲ. ನಾನೇ ಹೋಗ್ತೀನಿ. ಬೈ. ಬೈ.
ಯಕ್ಷಾ! ಹೋಗ್ಬೇಡಾ! ಅಲ್ಲೇ ಕೂಡೋ! ಡಬ್ಬಲ್ ಸಂಬ್ಳ ಕೊಡ್ತೀನಿ!
ನೀತಿ:- ಕೆಲಸದೋರ್ನ ಉಳಸ್ಕೊಳ್ಳೋದು ಯಾವಾಗ್ಲಿಂದ್ಲೂ ಕಷ್ಟಾನೇ!

# "ವಕೀಲಿ-ವಶೀಲಿ"

—ಕಿಟ್ಟು

ಇತ್ತೀಚೆಗೆ ನಡೆದ ವಕೀಲ ಸಂಘದ ಸಮ್ಮೇಳನದಲ್ಲಿ ಭಾಗವಹಿಸಿದ ನನ್ನ ಪರಿಚಯದ ವಕೀಲರೊಬ್ಬರು ದಾರಿಯಲ್ಲಿ ಸಿಕ್ಕಿದರು.

"ಸ್ವಾಮಿ, ನಿಮ್ಮ ಸಮ್ಮೇಳನದಲ್ಲಿ ಇತ್ಯರ್ಥವಾಗದೇ ಉಳಿದಿರುವ ಕೇಸುಗಳ ವಿಲೇವಾರಿಯ ಬಗ್ಗೆ ಚರ್ಚೆ ನಡೆಯಿತೇ ?" ನಾನು ಕೇಳಿದೆ.

"ಆ ಮಾಮೂಲು ವಿಚಾರಗಳಿಗೆಲ್ಲ ಪುರುಸೊತ್ತೆಲ್ಲಿ ? ನ್ಯಾಯಾಧೀಶರುಗಳು ಸರ್ಕಾರಿ ಔತಣಕೂಟಗಳಿಗೆ ಹೋಗಬೇಕೇ ಬೇಡವೇ, ಎಂಬುದರ ಬಗ್ಗೆ ಭಾರಿ ವಾಗ್ವಾದ ನಡೆಯಿತು"

ನಾನು ನಿಟ್ಟುಸಿರಿಟ್ಟೆ. ಆದರೂ ಕುತೂಹಲದಿಂದ. "ಏನು ತೀರ್ಮಾನ ಕೈಗೊಂಡಿರಿ ?" ಎಂದು ಕೇಳಿದೆ.

ಅವರು ನನ್ನನ್ನು ವಿಚಿತ್ರ ದೃಷ್ಟಿಯಿಂದ ನೋಡಿದರು. "ನೀನೆಂದಾದರೂ ನ್ಯಾಯಾಲಯಕ್ಕೆ ಬಂದಿದ್ದಿಯಾ?" ಎಂದು ಕೇಳಿದರು. ನಾನು ತಲೆಯಾಡಿಸಿದೆ. "ಒಂದೇ ಹಿಯರಿಂಗ್‌ನಲ್ಲಿ ಯಾವುದಾದರೂ ವಾದ ಇತ್ಯರ್ಥವಾಗಿದೆಯೇ?" ಪುನಃ ಕೇಳಿದರು. ನನ್ನ ಪೆದ್ದು ತನಕ್ಕೆ ನಾನೇ ಬಯ್ದುಕೊಂಡು, ಮುಂದಿನ ಪ್ರಶ್ನೆ ಕೇಳಿದೆ.

"ಹೋಗಲಿ ಸ್ವಾಮಿ ನ್ಯಾಯಾಲಯದಲ್ಲಿ ಕನ್ನಡ ಬಳಕೆಯ ಬಗ್ಗೆ ಯಾರಾದರೂ ಗಮನ ಸೆಳೆದರೇ ?"

"ಇಲ್ಲ ಇಲ್ಲ ಹ್ಞಾಂ! ಬಳಕೆ ಎಂದ ಕೂಡಲೇ ನೆನಪಾಯತು ನೋಡು. ದಿನ ಬಳಕೆ ವಸ್ತುಗಳ ಬೆಲೆ ಏರಿಕೆಗೆ ತಕ್ಕನಾಗಿ ನ್ಯಾಯಾಧೀಶರುಗಳ ಸಂಬಳ, ಸವಲತ್ತುಗಳು ಏರಿಲ್ಲ. ಈ ಬಗ್ಗೆ ಸಾಕಷ್ಟು ಚರ್ಚೆ ನಡೆಯಿತು. ಈ ಬಗ್ಗೆ ನನಗೇನೂ ಆಸಕ್ತಿ ಇಲ್ಲದಿದ್ದರೂ, 'ಏನು ತೀರ್ಮಾನವಾಯಿತು' ಎಂದು ಪುನಃ ಕೇಳಲಿದ್ದವನು, ನೆನಪಾಗಿ ನಾಲಿಗೆ ಕಚ್ಚಿಕೊಂಡೆ. ಈ ಸಮ್ಮೇಳನದಲ್ಲಿ, ಪ್ರಯೋಜನಕರವಾದದ್ದು ಏನಾದರೂ ಚರ್ಚೆಯಾಗಿರಬಹುದೆಂಬ ನನ್ನ ನಂಬಿಕೆ ಕುಸಿಯುತ್ತಾ ಬಂದರೂ,

ಆಸೆ ಬಿಡದೇ ಪ್ರಶ್ನಿಸಿದೆ.

"ಜನತಾ ನ್ಯಾಯಾಲಯುಗಳ ನೇಮಕಾತಿ ಹಾಗೂ ಅವುಗಳ ಕಾರ್ಯ ನಿರ್ವಹಣೆಯ ಬಗ್ಗೆ ನಿಮ್ಮ ಸಮ್ಮೇಳನದ ನಿಲುವೇನು?'

"ಈಗ ನಮಗೆ ಇರುವ ಸಮಸ್ಯೆಗಳೇ ಹಾಸಿ ಹೊದೆಯುವಷ್ಟಿರುವಾಗ, ಈ ಹೊಸ ನ್ಯಾಯಾಲಯುಗಳ ಬಗ್ಗೆ ಚರ್ಚೆ ಮಾಡಿ, ಸಮಯ ಹಾಳುಮಾಡಬೇಕಾಗಿತ್ತೆಂದು ನಿನ್ನ ಅಭಿಪ್ರಾಯವೋ? ನ್ಯಾಯಾಧೀಶರ ವರ್ಗಾವಣೆಯಲ್ಲಿ ಕೇಂದ್ರ, ರಾಜ್ಯಗಳ ಹಸ್ತಕ್ಷೇಪ, ನ್ಯಾಯಾಧೀಶರುಗಳ ನೇಮಕಾತಿಗೆ ಸಚಿವ ಸಂಬಂಧಿಗಳ ಶಿಫಾರಸು, ಇತ್ಯಾದಿ ಸ್ವಾರಸ್ಯಕರ ವಿಚಾರಗಳನ್ನು ಚರ್ಚಿಸಿದೆವು. ಪೇಪರ್‌ನಲ್ಲಿ ನೋಡಲಿಲ್ಲವೇ ನೀನು?" ಎಂದು ಕೇಳಿದರು.

ತೀವ್ರ ಹತಾಶನಾದೆ ನಾನು. ಹಾಗಾದರೆ ಈ ಸಮ್ಮೇಳನದ ಉಪಯೋಗವೇನು? ಕೇಸುಗಳ ವಿಲೇವಾರಿ ಹಾಗಿರಲಿ, ಸಮ್ಮೇಳನದಲ್ಲಿ ಆರೋಪ ಪ್ರತ್ಯಾರೋಪ ಮಾಡಿಕೊಂಡು ಇನ್ನೆರಡು ಹೊಸಕೇಸುಗಳು ಕೋರ್ಟಿನಲ್ಲಿ ದಾಖಲಾಗದಿದ್ದರೆ, ಅದೇ ನಮ್ಮ ಪುಣ್ಯ! ಇಷ್ಟಕ್ಕೂ ನನ್ನದೇ ತಪ್ಪು. ವಕೀಲರ ಸಂಘದ ಸಮ್ಮೇಳನದಲ್ಲಿ ಅವರ ಕುಂದು ಕೊರತೆಗಳು ಚರ್ಚೆಯಾಗುತ್ತವೆಯೇ ಹೊರತೂ, ಪೆಂಡಿಗ್ ಕೇಸುಗಳ ಬಗ್ಗೆ, ಕಕ್ಷಿದಾರರ ಬಗ್ಗೆ ಚರ್ಚೆ ಯಾಗುತ್ತದೆ ಎಂದು ನಾನೇಕೆ ನಿರೀಕ್ಷಿಸಬೇಕಿತ್ತು?

''Justice delayed is justice denied'' ಎಂಬ ವಾಕ್ಯದ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ಇದು ಶುದ್ಧ ಅನ್ಯಾಯ. ಜಸ್ಟೀಸ್‌ಗಳ ನೇಮಕಾತಿಯಲ್ಲಿ ಡಿಲೇ ಆಗಲೀ, ಜಸ್ಟೀಸ್‌ಗಳ ಬೇಡಿಕೆಗಳ ಡಿನೈ ಆಗಲೀ ಆಗಕೂಡದು!"

ಇದ್ಯಾಕೋ ಕೇಸು ಎಡವಟ್ಟಾಗುತ್ತಿದೆ ಎಂದು ಅರಿವಾಯಿತು. ಇನ್ನೂ ನ್ಯಾಯಾಂಗ ಶಾಸಕಾಂಗಗಳ ಸಂಬಂಧದ ಬಗ್ಗೆ ಪ್ರಶ್ನೆ ಕೇಳ ಬೇಕಿತ್ತು. ಆದರೆ ಈ ಎಡವಟ್ಟು ಆಸಾಮಿ, ನ್ಯಾಯಧೀಶರುಗಳಿಗೆ ನೀಡುವ ಔತಣಕೂಟಗಳಲ್ಲಿ ಅನ್ಯಾಂಗಗಳ ಬಗ್ಗೆ ಕೊರೆಯುಬಹುದೆನ್ನಿಸಿತು! ನಮಸ್ಕಾರ ಹೇಳಿ ಗಲ್ಲಿಯೊಂದರಲ್ಲಿ ನುಸುಳಿ ಪಾರಾದೆ.

# ಬಿಯರೀಕ್ಷೆ

—ಕಪಟ ಕವಿ

---

ಬಿಸಿಲಿನುಪಟಳ ತಣ್ಣಗಾಯಿತು
ಸಂಜೆ ತಣ್ಣಗೆ ಮೆರೆಯಿತು
ಬಾರು ಲೋಕದ ದ್ವಾರ ತೆರೆಯಿತು
ಬಿಯರ ದಾಹವು ಕರೆಯಿತು !

ಸುತ್ತ ನಗುವಿನ ಗಲಭೆಯೆಬ್ಬಿಸಿ
ಸೊಗವು ಹರಡಿತು ಬಾರಿಗೆ
ಗಾಜು ಗಾಜಿಗೆ ತಟ್ಟಿ ಕಿಣಿಕಿಣಿ
ಗ್ಲಾಸು ಬಗ್ಗಿಸು ಮೆಲ್ಲಗೆ !

ಮನದ ದುಗುಡವ ದೂರ ಮಾಡಿಸಿ
ಇಹದ ನೈಜತೆ ಮರೆಯಿಸಿ
ಕಾಡು ಹರಟೆಯ ಗಾಲಿಯೋಡಿಸಿ
ಹಗುರ ತಲೆಯಲ್ಲಾಡಿಸಿ !

ಫ್ರೆಂಡ್ ಬಂದನು ಬಂದ ಬಂದನೆ
ಎಂದು ಕಾದಿಹ ಪ್ರಾಣಿಗೆ
ಬಾರೆ ಸಗ್ಗವು, ತಾನೆ ಇಂದ್ರನು
ಬೇರೆ ಬೇಡವು ಇವನಿಗೆ !

(ನರಸಿಂಹ ಸ್ವಾಮಿ ಯವರ ಕ್ಷಮೆ ಕೋರಿ)



# ಇಪ್ಪತ್ತೊಂದನೆಯ ಶತಮಾನ ಬರಲಿದೆ.

ಕೇಫ.

---

ಇನ್ನು ಕೆಲವೇ ವರ್ಷಗಳು ಕಳೆದರೆ ನಮ್ಮ ಪ್ರಪಂಚ 21ನೇ ಶತಮಾನಕ್ಕೆ ಕಾಲಿಡುತ್ತೆ ನೆನೆಸಿಕೊಂಡ್ರೆ, ಮೈಜುಮ್ ಅಂತದೆ ನಂಗೆ – ರತ್ನಂಗೆ ಯೆಂಡ ಕಂಡ್ರೆ ಆಗ್ತಿದ್ದಾಗೆ ! ಆದರೆ ಈ ಇಪ್ಪತೊಂದ್ನೇ ಶತಮಾನಾ ಅನ್ನೋದು ಬರುತ್ತೇಂತ ರಾಜೀವ್‌ಗಾಂಧಿಯವರು ನಮಗೆ ಜ್ಞಾಪಿಸದೇ ಇದ್ದಿದ್ದರೆ, ಅದರ ಕಲ್ಪನೇನೇ ನಮಗೆ ಬರ್ತಿರ್ಲಿಲ್ಲಾಂತ ನೆನೆಸಿಕೊಂಡ್ರೆ ನನಗೆ ಮತ್ತೊಮ್ಮೆ ಜುಮ್ ಅಂತದೆ - ರತ್ನಂಗೆ ಬುಂಡೇ ಬೇವಾರ್ಸಿ ಒಟ್ಟಿಗೆ ಸಿಕ್ಕಿ ಬಿಟ್ಟಿದ್ರೆ ಆಗ್ತಿದ್ದಾಗೆ ! ಅಂದ್ರೆ - ಈ 21ನೇ ಶತಮಾನ ಬರ್ತಾನೇ ಇರ್ಲಿಲ್ಲಾಂತಲ್ಲ, ಬಂದೇ ಬರೋದು. ಆದರೆ ತಾರೀಕು 1-1-2000. ಅಂದು ಹುಟ್ಟೋ ಸೂರ್ಯ ಹೊಸಾಸೂರ್ಯ ಅಂತ ನಮಗೆ ಗೊತ್ತಾಗ್ತಾನೇ ಇರ್ಲಿಲ್ಲ.

ನಮ್ಮ ಹೆಗ್ಗಡದೇವನ ಕೋಟೆ ಅಖಿಲಾಂಡಯ್ಯನ ಮಗ ಅಕಿಲಾಂಡಿ ಉರುಫ್ ಮುರುಳಿ ಉರುಫ್ ಟಿಪ್ಪೂನ, ಅವನಪ್ಪ "ನೀನು 21ನೇ ಶತಮಾನಕ್ಕೂ ಬಂದ್ರೂ ಇದೇ ರೀತಿ ಮಂಗನ ಹಾಗೇ ಇರ್ತೀ" – ಅಂತ ಟೀಕೆ ಮಾಡಿದಾಗ – ಇದೇ ಟಿಪ್ಪು ಉರುಫ್ ಮುರಳಿ ಉರುಫ್ ಅಕಿಲಾಂಡಿ ಕೇಳಿದನಂತೆ – 21ನೇ ಶತಮಾನ ಬರ್ತದಾ ? ಕ್ರಿಸ್ತಶಕಾನಾ ? ಕ್ರಿಸ್ತಪೂರ್ವಾನಾ ? ಅಂತ ! ಮಗನ ಮಾತಿಗೆ ಹಿರಿಯ ಅಖಿಲಾಂಡಯ್ಯ ಗಡಿಬಿಡಿಯಾಗಿದ್ದ–ಅವನಿಗೂ ಸರಿಯಾಗಿ ಗೊತ್ತಿರಲಿಲ್ಲ. ನನ್ನ ನಿಮ್ಮಲ್ಲಿರಲಿ – ನಂಗೂ ಒಂದೊಂದು ಬಾರಿ ಹಾಗಾಗುತ್ತೆ. ಕ್ರಿಸ್ತಶಕ ಇಪ್ಪತ್ತೊಂದನೇ ಶತಮಾನ - ಅಂತ ಸ್ಪಷ್ಟವಾಗಿ ಹೇಳ್ದೇ ಇದ್ದರೆ - ನಾನೂ ಮಂಕು ಮಂಕಾಗಿ ಯಾರನ್ನಾದರೂ ಕೇಳಿ ತಿಳ್ಕೋಬೇಕಾಗುತ್ತೆ. ಏಕೆ ಅಂದರೆ ಈಗ ನಮ್ಮ

ನಮ್ಮ ಯುವ ಜನಾಂಗದಲ್ಲಿ ಚಾಲ್ತೀಲಿರೋ ಡಿಸ್ಕೋ ಡ್ಯಾನ್ಸ್ ನೋಡಿದರೆ ಕ್ರಿಸ್ತ ಪೂರ್ವದಲ್ಲಿ ನರಬಲಿ ಕೊಡೋವಾಗ ಕಾಡು ಜನರು ಮಾಡ್ತಿದ್ದ ಕುಣಿತವಿದ್ದಾಗೇ ಇರುತ್ತೆ. ಅವರು ಬಿಟ್ಟಲ್ಲಿಂದ ನಮ್ಮ ಯುವಜನಾಂಗ ಎತ್ಕೊಂಡಿದ್ದ ಹಾಗೆ ಕಾಣುತ್ತೆ. ಪ್ರತಿನಿತ್ಯ ನಡೀತಿರೋ ಕೊಲೆ, ಸೇಡಿನ ರೀತಿ ನೋಡಿದ್ರೆ ಕ್ರಿಸ್ತಪೂರ್ವ ದಲ್ಲಿ ಆದಿಮಾನವರು ಮಾಡ್ತಿದ್ದ ಕೊಲೆ ಸೇಡುಗಳ ರೀತೀಲೇ ಇರೋ ಹಾಗೇ ಕಾಣುತ್ವೆ.

ಆದ್ರೂ ಆ ಕ್ರಿಸ್ತಪೂರ್ವದ ಜನರಲ್ಲಿ ಅತೀ ಸಾಧು ಜನರೂ ಇದ್ದಿರಬೇಕು. ಇಲ್ದಿದ್ದಿದ್ರೆ ಬುದ್ಧನಂಥಾವರು ಹುಟ್ಟುತ್ತಿರಲಿಲ್ಲ. ಕ್ರಿಸ್ತಶಕ ಇಪ್ಪತ್ತೊಂದನೇ ಶತ ಮಾನದಲ್ಲಿ ಬುದ್ಧ ನಂಥಾವರು ಆಗಲೀ ಅಥವಾ ಅದೇನೇನೋ ಗುಪ್ತವಾಗಿದ್ದ ಸತ್ಯಾಂಶಗಳೆಲ್ಲಾ ದಿಢೀರಂತ ಗೋಚರವಾಗಿ ಜ್ಞಾನಿಗಳಾದ ಋಷಿಗಳಾಗಲೀ ಬರ್ತಾರೇ ಅಂತ ಕಲ್ಪಿಸಿಕೊಳ್ಳೋಕೂ ಸಾಧ್ಯವಿಲ್ಲ - ಈ ಅಣುಬಾಂಬು ಗೊಂದಲದಲ್ಲಿ ಜನ ಅನ್ನೋ ಪ್ರಾಣಿಗಳು ಪ್ರಪಂಚದಲ್ಲಿ ಕ್ರಿ. ಶ. 1-1-2000 ವರಿವಿಗೂ ನಾಶ ವಾಗದೆ ಉಳಿದಿದ್ರೆಕೂಡ !

ಕ್ರಿಸ್ತಶಕ 21ನೇ ಶತಮಾನ ಬಂದೇ ಬಿಡ್ತು ಅಂತಿಟ್ಕೊಳ್ಳಿ. ನಾನೂ ನೀವೂ ಅದುವರ್ಗೂ ಯಾವ ಆಪತ್ತಿಗೂ ಒಳಗಾಗ್ದೆ, ಆ ಸುದಿನ ಅಂದ್ರೆ ಕ್ರಿ. ಶ. 1-1-2000 ದ ಬೆಳಿಗ್ಗೆ ಎದ್ದೇ ಬಿಡ್ತೇವೆ ಅಂತಿಟ್ಕೊಳ್ಳಿ. ಈ ಕೆಜಿ ತೂಕದ ಲೆಕ್ಕ ದಲ್ಲಿ ಬೆನ್ನ ಮೇಲೆ ಪುಸ್ತಕಗಳನ್ನು ಹೊತ್ತುಕೊಂಡು ಕಲಿಯೋಕೆ ಹೋಗೋ ಹೈ ಕ್ಳೆಲ್ಲಾ ಗೂನು ಬೆನ್ನಿನ ಯುವ ಜನಾಂಗವಾಗಿರುತ್ತಾರೆ. ಈಗ ಎಲ್ಲಾ ದೊಡ್ಡ ನಗರಗಳಲ್ಲೆಲ್ಲಾ ತೋರಿಸ್ತಿದ್ದಾರಲ್ಲ ಸಿನಿಮಾಗಳಲ್ಲಿ ಒಂದು ಬಾಹ್ಯ ಗ್ರಹದ ಮಾನವ ಇ.ಟಿ. E.T. ಅಂಥಾ ಮಾನವ ಜಾತ ಈ ಭೂಗ್ರಹದ ಮೇಲೂ ವಿಕಾಸಗೊಳ್ಳೋಕೆ ನಮ್ಮ ಈ ಕೆ ಜಿ ತೂಕದ ವಿದ್ಯಾಭ್ಯಾಸ -ಮೊದಲ ಹೆಜ್ಜೆ ಇದ್ರೂ ಇರಬಹುದು ! ಇವನ್ನೆಲ್ಲಾ ಯೋಚ್ನೆ ಮಾಡ್ತಾ ಕೂತ್ರೆ ನಮ್ಮ ಜೀವ್ಸ್ ಹೇಳೋ ಹಾಗೆ ನಮ್ಮ ಇಮ್ಯಾಜಿನೇಷನ್ ಬಾಗಲ್ ಆಗುತ್ತೆ ಅಲ್ವೆ ? ಅದೇ ರೀತಿ ನಮ್ಮಲ್ಲಿ ಬರ್ತಾ ಬರ್ತಾ ಮಾತೃಭಾಷೇಮೇಲಿರೋ ಪ್ರೇಮ ಮಾಯವಾಗ್ತಾ ಅದು ಹುಚ್ಚಾಗಿ ತಿರುಗ್ತಿರೋದು ನೋಡಿದ್ರೆ ನಮ್ಮ ಮೈಂಡು ಬಾಗಲ್ ಆಗ್ತತೆ. ಅದೇ ರೀತಿ ನಮ್ಮಲ್ಲಿ ಧರ್ಮದ ಮೇಲೆ ಇರೋ ಅಭಿಮಾನ ಮಾಯವಾಗ್ತಾ ಜಾತೀ ಮೇಲಿನ ಹುಚ್ಚು ಜಾಸ್ತಿಯಾಗ್ತಿರೋದು ನೋಡಿದ್ರೆ ನಮ್ಮ ಫ್ಯೂಚರ್ರೇ ಬಾಗಲ್ ಆಗುತ್ತೆ !

ಕಳೆದವಾರ - ಮೂರನೇ ಸ್ಟಾಂಡರ್ಡ್‌ನಲ್ಲಿ ಓದ್ತಿರೋ ನನ್ನ ಮೊಮ್ಮಗ ನನ್ನ ಹತ್ರ ಬಂದು “ತನ್ನ ಸೋಷಿಯಲ್ ಸ್ಟಡಿ” ಪುಸ್ತಕ ತೋರಿಸ್ತಾ ಕೇಳಿದ— “ತಾತ- Delhi is a union territory ಅಂದ್ರೆ ಏನು?”-ಅಂತ. ನಿಜವಾಗಿ ಆ ಹುಡುಗನಿಗೆ

ತಿಳಿಯೋ ಹಾಗೆ ಬಿಡಿಸಿ ಹೇಳೋಕೆ ನನಗೆ ಗೊತ್ತಾಗಲಿಲ್ಲ. "ನಿನ್ನ ಕ್ಲಾಸಿನಲ್ಲಿ ಟೀಚರ್ ಏನು ಹೇಳಿಕೊಟ್ರಪ್ಪಾ ?" — ಅಂತ ಕೇಳಿದೆ. ಅದಕ್ಕೆ ಹುಡುಗ ಹೇಳ್ದ— "ಡೆಲ್ಲಿ ಈಸೆ ಯೂನಿಯನ್ ಟೆರ್ರಿಟರಿ" — ಅಂತ ಮೂರು ಬಾರಿ ಒತ್ತಿ ಒತ್ತಿ ಹೇಳಿದರು – ನನ್ನ ಕ್ಲಾಸ್ ಮಿಸ್ಸು ಅಷ್ಟೆ ಅಂದ. ಈಗ ನಾಡಿನಲ್ಲಿ ಅನೇಕ ಕಡೆ I.A.S, I.P.S., I.R.S ಗಳಿಗೆ ನಡಸ್ತಿರೋ ಇಂಟರ್‌ವ್ಯೂಗಳಲ್ಲಿ ವಿದ್ಯಾವಂತರು– ಪದವೀಧರರು ಕೂಡ ಈ ಮೂರನೇ ಸ್ಟಾಂಡರ್ಡ್ ಯೂನಿಯನ್ ಟೆರಿಟೊರಿ ಬಗ್ಗೆ ಖಚಿತವಾಗಿ ಹೇಳಿರಲಾರರು. ಅನೇಕರಿಗೆ ದೆಹಲಿಯಲ್ಲೇ ನಮ್ಮ ಕೇಂದ್ರ ಸರ್ಕಾರ ವಿದೇಂತ ಕೂಡ ಗೊತ್ತಿರಲಿಕ್ಕಿಲ್ಲ – ಇರಲಿ. ಆದರೂ ನನ್ನ ಜವಾಬ್ದಾರಿ ತೀರಿಸಿ ಕೊಳ್ಳೋಕೆ ನಾನು ಹುಡುಗನಿಗೆ ಹೇಳ್ದೆ "ನೋಡು ಮಗು, ಈಗ ನಮ್ಮ ಮನೇ ಲಿರೋ ಹಾಲು ರೂಮುಗಳು, ಮನೇಲಿರೋರ್ಗೆಲ್ಲರಿಗೂ ಸೇರಿದ್ದು. ಆದ್ರೆ ಅಡಿಗೆ ಮನೆ ಇದೆಯಲ್ಲಾ ಅದು ಅಮ್ಮನಿಗೆ ಮಾತ್ರ ಸೇರಿದ್ದು ಅಲ್ವೆ ? ಅದೇ ರೀತಿ ದೆಹಲಿ ನಮ್ಮ ಕೇಂದ್ರ ಆಡಳಿತಕ್ಕೆ ಸೇರಿದ್ದು ಅಂದೆ. ನನ್ನ ವಿವರಣೆ ಹುಡಗನಿಗೆ ಸರಿತೋರಲಿಲ್ಲ. "ನಿಂಗೂಗೊತ್ತಿಲ್ಲ ತಾತ. ಡೆಲ್ಲಿ ಅಂದ್ರೆ ಅಡಿಗೆ ಮನೆ ಇದ್ದ ಹಾಗೆ. ಅಂತ ಬರೆದರೆ ಮಿಸ್ಸು ತಪರಾಕು ಕೊಡ್ತಾರೆ" ಅಂದ.

ಇದೊಂದೇ ನನಗೆ ಸಮಾಧಾನ ಕಂಡಿದ್ದು. ಹಿರಿಯರ ಬುದ್ಧೀನ ಪ್ರಶ್ನಿಸೋ ಈ ಸಣ್ಣ ಪೀಳಿಗೆಯೋ ಮುಂಬರುವ ಕ್ರಿಸ್ತಶಕ ಇಪ್ಪತ್ತೊಂದನೇ ಶತಮಾನದ ಹೋಪ್ಸ್ ಆಶಾದೀಪಗಳು. ಆದರೆ ಈ ಹವಾಲೀ ವಿದ್ಯಾಭ್ಯಾಸ, ಭಾಷಾಹುಚ್ಚು, ಜಾತಿಹುಚ್ಚು, ಅಂತಸ್ತು ಹುಚ್ಚುಗಳಂತಹ ಅಹಮ್ಮುಗಳಿಂದ ಈ ಮಕ್ಕಳನ್ನು ಹೊರಕ್ಕೆ ತರುವವರ್‍ಯಾರು ? ಪುನಃ ಸ್ಟೇಟಸ್ ಕೋ ಆಂಟಿ - ನನ್ನ ಮೈಂಡ್ ಬಾಗಲ್ ಆಗ್ತಾ ಇದೆ.

o — o



# ಇಪ್ಪತ್ತೊಂದನೆಯ ಶತಮಾನ  ನನ್ನ ನಿರೀಕ್ಷೆ

—ಶಿವು

---

ಈಚೆಗಂತೂ, ನಾಳೇ ಏನು ನಿರೀಕ್ಷಿಸಬೇಕೂ ಅನ್ನೋದೇ ತಿಳೀದು. ಇನ್ನು ಇಪ್ಪತ್ತೊಂದನೆಯ ಶತಮಾನದಲ್ಲಿ ಏನಾಗುತೇ ಅಂತ ಹೇಗೆ ಹೇಳೋಕ್ಕಾಗುತ್ತೇ, ಏನು ಮಾಡಲಿ, ಅಂತ ಏನೂ ತೋಚದೇ ಕೂತಿದ್ದೆ. ಪಕ್ಕದ್ಮನೆ ಪ್ರೊಫೆಸರ್ ಹುಚ್ಚೂರಾವ್ ಅಕಸ್ಮಾತ್ತಾಗಿ ಬಂದರು. ನನ್ನ ಸಮಸ್ಯೇನ ಅವರಿಗೆ ಹೇಳಿದೆ. "ನನ್ನ ಜೊತೆ ಬನ್ನಿ" ಅಂತ ಅವರು ನೇರವಾಗಿ ಅವರ ಗ್ಯಾರೇಜಿನ ಕಡೆ ನಡೆದರು. ನಾನು ಒಳಹೊಕ್ಕೆ. ವಿಚಿತ್ರ ದೃಶ್ಯ !. ಒಂದು ಮುತ್ತಾತನ ಕಾಲದ ಟಿ. ಮಾಡಲ್ ಫೋರ್ಡ್ ಕಾರು. ಕಾರಿನ ಸುತ್ತ ಅದೇನೇನೋ ಮೀಟರುಗಳು ಟಿ.ವಿ. ಪರದೆಗಳು, ಇನ್ನೇನೋ ಯಂತ್ರಗಳು. ಪ್ರೊಫಸರು. ಕಾರಿನ ಎಡಬಾಗಿಲು ತೆಗೆದು "ಕೂಡ್ರಿ" ಅಂದರು. ಕೂತೆ. ಬಳಸಿ ಬಂದು ಅವರೂ ಚಾಲಕನ ಸೀಟಿನಲ್ಲಿ ಕೂತು "ಯಾವ ಇಸ್ವಿ?" ಅಂತ ಕೇಳಿದರು ಇಸ್ವಿ ? ಏನು ? ಯಾಕೆ ? ಏನೂ ಅರ್ಥವಾಗದೇ ಕೇಳಿದೆ. "ಅಯ್ಯೋ, ಇದು ಕಾಲ ಯಾನ ಯಂತ್ರಾರೀ. ನನ್ನ ನವ ಸಂಶೋಧನೆ. ಯಾವ ಕಾಲಕ್ಕೆ ಹೋಗ ಬೇಕು ಬೇಗ ಹೇಳಿ. ಆರು ಘಂಟೆ ನಂತರ ಪವರ್ ಷಟ್ ಡೌನ್ ಇದೆ" ಅಂತ ಅವಸರ ಪಡಿಸಿದರು. ನಾನು ಬೇಗನೆ 2050 ಅಂತ ಬಡಬಡಿಸಿದೆ ಯಾವುದೋ ಗುಂಡಿ ಒತ್ತಿದರು. ಮಿಂಚು ಹೊಳೆದಂತಾಗಿ ಕಣ್ಣು ಕೋರೈಸಿತು. ಕಣ್ಣು ಬಿಟ್ಟಾಗ ಮಾರ್ಕೆಟ್ ಬೀದಿಯಲ್ಲಿ ನಿಂತಿದ್ದೆ. ಪಕ್ಕದಲ್ಲಿ ಪ್ರೊಫಸರು.

ರಸ್ತೆಯ ಎರಡು ಬದಿಯಲ್ಲೂ ಸಾಲು ಅಂಗಡಿಗಳು. ಚಿನ್ನ ಬೆಳ್ಳಿ ಅಂಗಡಿಗಳ ತರಹ ಕಂಡವು. ನೋಡೋಣ ಅಂತ ಒಳಕ್ಕೆ ಹೋದೆವು 'ಬನ್ನಿ, ದಯಮಾಡಿಸಿ" ಅತ್ಯಂತ ಸೌಜನ್ಯತೆಯಿಂದ ಸ್ವಾಗತಿಸಿದ ಅಂಗಡಿಯವ. ಗೋಡೆ ಎತ್ತರಕ್ಕೂ ಗಾಜಿನ

ಬೀರುಗಳು. ಒಳಗೆ, ಒಡವೆ ಬದಲು, ನಾಲ್ಕು ನಾಲ್ಕು ತರಕಾರಿಗಳ ಸಣ್ಣ ಸಣ್ಣ ತಟ್ಟೆಗಳು, ಬೊಂಬೆ ಹಬ್ಬಕ್ಕೆ ಪ್ಲಾಸ್ಟಿಕ್ ತರಕಾರೀನ ಇಟ್ಟಿರ್‍ತಾರಲ್ಲ ಹಾಗೆ. ನಮ್ಮ ಮುಖನೋಡಿ, ಅಂಗಡಿಯವನೇ "ತಾಜಾ ತರಕಾರಿ ಸ್ವಾಮಿ, ಎಷ್ಟು ಲಾಟ್ ಬೇಕಂ ಹೇಳಿ?" ಅಂತ ಕೇಳಿದ. ಬೆಲೆ ಎಷ್ಟು ಅಂತ ಕೇಳಿದರು ಪ್ರೊ.ರವರು 'ಬೇರೇ ಊರಿನವರ ತರಹ ಕಾಣಿಸ್ತೀರಿ, ನಿಮಗೋಸ್ಕರ ಮುನ್ನೂರು ರೂಪಾಯಿ" ಅಂದ। "ಆಮೇಲೆ ಬರ್‍ತೀವಿ" ಅಂತ ಹೇಳಿ ಹೊರ ಬಂದೆವು.

ಮಾರ್ಕೆಟ್ ದಾಟಿ ನಡೆದು ಹೋದರೆ ಒಂದು ಸ್ಕೂಲ್ ಕಾಣಿಸಿತು. ಕಟ್ಟಡದ ಒಂದು ಕಿಟಕಿ ಹತ್ತಿರ ಹೋಗಿ ಇಣುಕಿದೆವು. ಚರಿತ್ರೆ ಪಾಠ ನಡೆಯುತ್ತಿತ್ತು.

"ಭಾರತ ದೇಶದ ಚರಿತ್ರೆಯಲ್ಲಿ 1986ನ್ನು ಸುವರ್ಣಯುಗ ಅಂತ ಕರೆಯುಬಹುದು. ಏಕೆಂದರೆ ಆ ಇಸವಿಯಲ್ಲಿ ಮುಸ್ಲಿಂ ವೈಯಕ್ತಿಕ ಕಾಯಿದೆ ಜಾರಿಗೆ ಬಂದು, ಮೂಲೆ ಗುಂಪಾಗಿದ್ದ ಮೌಲ್ವಿಗಳ ಅಧಿಕಾರ ಮತ್ತೆ ಪ್ರಾಧಾನ್ಯ ಪಡೆಯಿತು. ಇದನ್ನೇ ಅನುಸರಿಸಿ, 1996 ರಲ್ಲಿ ಹಿಂದೂ ವೈಯಕ್ತಿಕ ಕಾಯಿಂದೆಯನ್ನು ಸರ್ಕಾರ ಅಂಗೀಕರಿಸಿ ಭಾರತ ಒಂದು ಜಾತ್ಯತೀತ ರಾಷ್ಟ್ರ ಎಂಬುದನ್ನು ಜಗತ್ತಿಗೇ ಸಾರಿ ಹೇಳಿತು. ಈ ಕಾಯದೆಯ ಪ್ರಕಾರ, ಪತಿ ಬದುಕಿದ್ದರೂ, ವರದಕ್ಷಿಣೆ ತರದ ಸತಿಯನ್ನು ಚಿತೆಗೇರಿಸುವ ಸತೀ ಗಮನ ಪದ್ಧತಿಯನ್ನು ಜಾರಿಗೆ ತರಲು ಅನುಕೂಲವಾಯಿತು.................

ಮುಂದಿನ ಕಿಟಕಿಯಲ್ಲಿ ಭೂಗೋಳ ಪಾಠ! ಪಾಠ ಹಿಂದಿಯಲ್ಲಿ ನಡೆಯುತ್ತಿತ್ತು. "ಬೃಹತ್ ಬೆಂಗಳೂರು ಪ್ರದೇಶವನ್ನು 2025ರಲ್ಲಿ ಕೇಂದ್ರ ತನ್ನ ನೇರ ಆಡಳಿತಕ್ಕೆ ತೆಗೆದು ಕೊಂಡಿತು. ಆಡಳಿತ ಅನುಕೂಲಕ್ಕಾಗಿ, ಈ ಪ್ರದೇಶವನ್ನು ನಾಲ್ಕು ವಲಯಗಳನ್ನಾಗಿ ವಿಂಗಡಿಸಲಾಗಿದೆ. ಬೆಂಗಳೂರು ಪೂರ್ವ, [ಅಲಸೂರು ಸೇರಿ] ತಮಿಳು ವಲಯ, ದಕ್ಷಿಣದ ತೆಲುಗು ವಲಯ, ಉತ್ತರದ [ಜಾಲ ಹಳ್ಳಿಯು ಸೇರಿದಂತೆ] ಮಲೆಯಾಳಿ ವಲಯ, ಹಾಗೂ ಪಶ್ಚಿಮದ ಇಂಗ್ಲೀಷ್ ವಲಯಂ. ಈ ಎಲ್ಲ ವಲಯಗಳಲ್ಲಿನ ಆಡಳಿತ, ಅಲ್ಲಿನ ಭಾಷೆಯಲ್ಲೇ ನಡೆಯುತ್ತಿರುವುದು ಈ ಪ್ರದೇಶಗಳಲ್ಲಿ ಪ್ರಜಾ ಪ್ರಭುತ್ವ ಆರೋಗ್ಯವಾಗಿದೆ ಎಂಬುದನ್ನು................

ನನಗೆ ತಲೆ ತಿರುಗುತ್ತಿತ್ತು. ಬೇಗ ಸ್ಕೂಲ್ ಬಿಟ್ಟು ಹತ್ತಿರದ ಒಂದು ಭವ್ಯವಾದ ಕಟ್ಟಡದ ವರಾಂಡದಲ್ಲಿ ಕೂತೆವು. ಕಟ್ಟಡ ಬಹಳ ನೂತನವಾಗಿದ್ದು, ಬಹು ಶುಚಿಯಾಗಿ ಇಟ್ಟಿದ್ದರು. ಯಾವುದಾದರೂ ವಿಮಾನ ಸಂಸ್ಥೆಯ ಕಛೇರಿ ಇರ

ಬಹುದೇ ಎಂದುಕೊಳ್ಳುತ್ತಿರುವಾಗಲೇ, ಒಬ್ಬ ಚೂಟಿಯಾಗಿದ್ದ ತರುಣ ಬಂದು "ಇದು ಕಂದಾಯ ಇಲಾಖೆ ನಿಮಗೆ ಏನು ಬೇಕಾಗಿತ್ತು?" ಅಂತ ಕೇಳಿದ.

"ನಿಮ್ಮಲ್ಲಿ ಹಲವು ಪ್ರಶ್ನೆಗಳನ್ನು ಕೇಳಬಹುದೇ?"

"ಅಗತ್ಯವಾಗಿ"

"ಕಂದಾಯ ಇಲಾಖೆ ಅಂತೀರ. ಕಛೇರಿ ಬಹಳ ಚೆನ್ನಾಗಿದೆ, ಪ್ರಜೆಗಳೆಲ್ಲಾ ತೆರಿಗೆ ಕಾಲಕಾಲಕ್ಕೆ ಕೊಡುತ್ತಿದ್ದಾರೆಯೇ?"

"ಪ್ರಜೆಗಳು ತೆರಿಗೆ ಏಕ್ರಿ ಕೊಡಬೇಕು? ಅದೆಲ್ಲಾ ಇಪ್ಪತ್ತನೆಯ ಶತಮಾನಕ್ಕೇ ಆಗಿ ಹೋಯಿತು. ತೆರಿಗೆ, ಗಿರಿಗೆ ಎಲ್ಲಾ ತೆರಿಗೆ ಅಧಿಕಾರಿಗಳೇ ಕೊಡ್ತಾರೆ."

"ಅಂದ್ರೆ ರಾಮರಾಜ್ಯ ಆಗೋಯ್ತಲ್ಲಾ ಸ್ವಾಮಿ! ಅಂದ ಹಾಗೆ ತೆರಿಗೆ ಅಧಿಕಾರಿಗಳಿಗೆ ಅಷ್ಟೆಲ್ಲಾ ಹಣ ಹೇಗೆ ಬರುತ್ತೆ?"

"ಇದೇನ್ರೀ ತಮಾಷೆ ಮಾಡ್ತೀರ. ತೆರಿಗೆ ಅಧಿಕಾರಿಗಳೇನು ದೇಶ ದ್ರೋಹಿಗಳು ಅಂದು ಕೊಂಡಿದ್ದೀರ? ತೊಗೋಳೋ ಲಂಚದಲ್ಲಿ ಒಂದು ಪಾಲನ್ನು ತೆರಿಗೆ ರೂಪ ದಲ್ಲಿ ಕೊಡಲೇ ಬೇಕು ಅಂತ 2015 ರಲ್ಲೇ ಸಮಗ್ರ ಲಂಚ ಮಸೂದೆ, ಕಾಯಿದೆ ಆಯಿತಲ್ಲಾ. ಈಗ ಅಧಿಕಾರಿಗಳು ಎಷ್ಟು ಬೇಕಾದರೂ ಲಂಚವನ್ನು ಅಧಿಕೃತ ವಾಗಿಯೇ ಪಡೆಯಬಹುದು ಆದರೆ ಪಡೆದ ಲಂಚಕ್ಕೆ ತಕ್ಕಹಾಗೆ ಬೇಗ ಕೆಲಸ ಮಾಡಿ ಕೊಡದಿದ್ದರೆ ಮಾರ್ಕೆಟ್ ಚೌಕದಲ್ಲೇ ಗುಂಡಿಟ್ಟು ಕೊಲ್ಲ ಬೇಕು ಅನ್ನೊ ವಿಧೇಯಕ ಬಂದು ಸರ್ಕಾರೀ ಕೆಲಸ ಎಲ್ಲಾ ಅತೀ ದಕ್ಷತೆಯಿಂದ ನಡೀತಾ ಇದೆ"

ಕಂದಾಯ ಇಲಾಖೆ ಬಿಟ್ಟು ಸ್ವಲ್ಪ ದೂರ ಹೋಗುವಷ್ಟರಲ್ಲಿ ಒಂದು ಉದ್ದ ವಾದ ಕ್ಯೂ ಕಾಣಿಸಿತು. ಪೂರ್ತಿ ಕ್ಯೂ ಅಲ್ಲ. ಬಾಲ ಮಾತ್ರ ತಲೆ ಎಲ್ಲೊ ಮೂರನೆ ರಸ್ತೆಯಲ್ಲಿ ತಿರುಗಿ ಮಾಯವಾಗಿತ್ತು. ಯಾವುದಕ್ಕೆ ಈ ಕ್ಯೂ ಅಂತ ಕೊನೇ ಪ್ರಾಣಿ ಯನ್ನು ಕೇಳಿದೆ. "ಎಲ್ಲಿಂದ ಬಂದೀರ್ರಿ. ಇದು ಎಂ.ಟಿ.ಆರ್ ದೋಸೇಗೆ ಕ್ಯೂನ್ರಪಾ" ಅಂದ ಆತ. "ಭಲೇ, ಪರವಾಗಿಲ್ಲ. ನಮ್ಮ ಕಾಲದ ಒಂದು ಸಂಸ್ಥೇನಾದ್ರೂ ಬದಿಕ್ಕೊಂಡು ಬಂದಿದೆಯಲ್ಲಾ, ಏನು ಹೇಳ್ತೀರಾ ಪ್ರೊಫೆಸರೇ?" ಅಂತ ಕೇಳಿದೆ. ನಿರುತ್ತರ. ಗಾಭರಿಯಿಂದ ತಿರುಗಿ ನೋಡಿದೆ. ಪ್ರೊಫೆಸರರ ಸುಳಿವೇ

ಇಲ್ಲ. ಅಯ್ಯೋ ದೇವರೇ ಪ್ರೊಫೆಸರಿಲ್ಲ, ಕಾರಿಲ್ಲ, ಹೇಗಪ್ಪಾ ಇಪ್ಪತ್ತನೇ ಶತಮಾನ ಸೇರಿಕೊಳ್ಳದು ಏನು ಗತಿ? ಏನು ಮಾಡಲಿ ಅಂತ ಹಲುಬಿದೆ. ದಿಕ್ಕೇ ತೋಚ ದಂತಾಯಿತು. ಹಠಾತ್ತನೆ ಹೊಳೆಯಿತು, ಕಾಲಯಾನ ಮಾಡುವ ಮುಂಚೆ ಸಹಾ ನನ್ನ ಮುಂದಿದ್ದ ಪ್ರಶ್ನೆ ಇದೇ. ಏನು ಮಾಡಲಿ? ವ್ಯತ್ಯಾಸವೇನೂ ಆಗಿಲ್ಲವಲ್ಲ! ನಿರ್ಯೋಚನೆಯಿಂದ, ದೋಸೆ ತಿನ್ನಲು ಸರದಿ ಕಾಯುತ್ತಾ ನಿಂತೆ.

---





# ೨೧ ನೆಯ ಶತಮಾನ— ನಿರೀಕ್ಷೆ

ಆ. ರಾ. ಸೇ.

---

ಫ್ಯೂಚರಾಲಜಿ ಅನ್ನುವ (ಬದುಕಿಲ್ಲದ ?) ವಿಜ್ಞಾನ ವಿಭಾಗದಲ್ಲಿ ಪೆಟ್ರೋಲಿಲ್ಲದ ಆಟೋಮೊಬೈಲುಗಳು; ಸ್ವಯಂಪ್ರೇರಣೆಯಿಂದ ಕೆಲಸ ಮಾಡಬಲ್ಲ ಅಲ್ಟಿಮೇಟ್ ಕಂಪ್ಯೂಟರುಗಳು ; ದೇಶದ ಮುಕ್ಕಾಲು ಭಾಗಕ್ಕಿಂತಲೂ ಹೆಚ್ಚು ಬೆಳೆದ ಕಾಂಕ್ರೀಟ್ ಜಂಗಲುಗಳು, ಸೂರ್ಯಯಾನ ಇತ್ಯಾದಿ ಮಹತ್ವಾಕಾಂಕ್ಷೆಯ ಚಿತ್ರಗಳನ್ನು ಕೊಡ ಲಾಗುತ್ತಿದೆ.

ಅದು ನಿಜವಾದಲ್ಲಿ ಸರ್ಕಾರಗಳನ್ನು, ಸಾಹುಕಾರರನ್ನು ಕೇಳದೆ ಧನೋತ್ಪಾದನೆ ಮಾಡಿ; ಸ್ವಯಂಪ್ರೇರಣೆಯಿಂದ ಜನಗಳ ಅಗತ್ಯಕ್ಕನುಗುಣವಾಗಿ ಹಣವನ್ನು ವಿತ ರಣೆ ಮಾಡುವ ಕಂಪ್ಯೂಟರುಗಳನ್ನು ನಾನು ನಿರೀಕ್ಷಿಸುತ್ತೇನೆ.

ಈಗಿರುವ ಹಾಗೆಯೇ ಮುಂದುವರಿದರೆ ಈ ಶತಮಾನದ ಅಂತ್ಯದೊಳಗಾಗಿ ಪಶ್ಚಿಮ ಘಟ್ಟಗಳಲ್ಲೆಲ್ಲಾ ನೀಲಗಿರಿ ಮರಗಳೇ ಬೆಳೆದು, ದ್ಯುತಿ ಸಂಶ್ಲೇಷಣೆಯಿಲ್ಲದೆ ಎಲ್ಲೆಲ್ಲೂ (ಕರ್ನಾಟಕದಲ್ಲಿ) ಕಾರ್ಬನ್‌ಡಯಾಕ್ಸೈಡೇ ತುಂಬಿರುವುದೆಂದು ನಿರೀಕ್ಷಿಸು ತ್ತೇನೆ.

ಯಾರಾದರೂ ಮಳೆ, ಬೆಳೆ, ನೀರು, ಗಾಳಿಗಳ ಬಗೆಗೆ ಕಾಳಜಿಯಿರುವವರು ಅಧಿಕಾರಕ್ಕೆ ಬಂದರೆ ಪಾಲಿಯೆಸ್ಟರ್, ಟೆರೀನ್. ರೇಯಾನ್ ಮೊದಲಾದ ಕೃತಕ ನೂಲುಗಳ ಉತ್ಪಾದನೆಯನ್ನೇ ಬಹಿಷ್ಕರಿಸುವ ಸುವರ್ಣಯುಗ ಬರಬಹುದು. ಆದರೆ ಅದರ ಸಾಧ್ಯತೆಗಳೇನೂ ಇಲ್ಲ, ಏಕೆಂದರೆ ಮೊನ್ನೆ ಹೀಗಾಯಿತು.

ಬಸ್ಸಿನಲ್ಲಿ ಬರುತ್ತಿದ್ದೆ. ನನ್ನ ಪಕ್ಕದಲ್ಲಿದ್ದವ ಒಳ್ಳೇ ಸ್ಫುರದ್ರೂಪಿ ಚಾಲಾಕು ಹುಡುಗ—ಪೊಟ್ಯಾಸಿಯಂ ಸಯನೈಡ್ ಎಂಬ ಸಂಯುಕ್ತದ ಗುಣಗಳನ್ನು ಓದುತ್ತಿದ್ದ. ಯಾಕೆ, ಬಿಎಸ್ಸಿ ಫೇಲೇ ? ಅಕ್ಟೋಬರಿಗೆ ಕಟ್ಟುವೆಯಾ ? ಎಂದು ಕೇಳಿದೆ.

ಅವನು ಬಿ.ಇ. ಪದವೀಧರ; ಎಂಬತ್ತು ಪರ್ಸೆಂಟ್ ತೆಗೆದವನು ಯಾವುದೋ ಇಂಟರ್‌ವ್ಯೂಗೆ ಹೋಗಿದ್ದನಂತೆ 'ಭಾರತದ ಮಾಜಿ ಉಪರಾಷ್ಟ್ರಪತಿಗಳ ಹೆಸರೇನು ?' ಎಂದು ಕೇಳಿದರಂತೆ ಅವನು, ನಾನು ಇಂಜಿನಿಯರ್ · ಯಾವ ಬಗ್ಗೆ ಕೇಳುತ್ತಿದ್ದೀರಿ, ವಿಷಯ ಸ್ಪಷ್ಟವಾಗಲಿಲ್ಲ ಎಂದನಂತೆ.

'ಅವರು ಯಾವ ಊರಿನವರು ? ' ಎಂದು ಕೇಳಿದರಂತೆ 'ಯಾರು ? ' ಎಂದನಂತೆ.

'ಅಷ್ಟು ತಿಳಿಯದವನಿಗೆ ಕೆಲಸಬೇಕೋ ? ಎಂದರಂತೆ. 'ಇಂಜಿನಿಯರ ಕೆಲಸಕ್ಕೆ ಅರ್ಹನೇ ಅಲ್ಲವೇ ಎಂದು ಪರೀಕ್ಷಿಸಲು ಯಾವ ಪ್ರಶ್ನೆ ಕೇಳಬೇಕೆಂದು ತಿಳಿಯದವರೂ ಪರೀಕ್ಷಕರೇ ? ' ಎಂದು ಕೇಳಿ ಹೊರಬಂದಂತೆ ಒಂದು ಎಸ್. ಡಿ. ಸಿ ಕೆಲಸದ ರೇಟು ತಿಳಿಯದ ಬಕರಗಳು ಹೀಗೆಲ್ಲಾ ಹಾರಾಡುತ್ತವೆ. ಆದುದರಿಂದ ಯಾವ ಭಯುವೂ ಇಲ್ಲ.

ಕಳೆದ ನಾಲ್ಕಾರು ವರ್ಷಗಳಿಂದ ದಕ್ಷಿಣದಲ್ಲಿ ಉತ್ತರದಲ್ಲಿ ನಡೆಯುವ ಅತಿವೃಷ್ಟಿ ಅನಾವೃಷ್ಟಿಗಳೇ ಇನ್ನು ಮುಂದುವರಿದರೆ ರಾಷ್ಟ್ರದ ಬಜೆಟ್ಟಿನ ಬಹುಭಾಗ, ಅಜಮಾಸು 50% ಪರಿಹಾರ ನಿಧಿಗೇ ಹೋಗುವ ಸಂಭವವಿದೆ.

ದೇಶದಲ್ಲಿ ಎಲ್ಲರೂ ತಮ್ಮನ್ನು ಹಿಂದುಳಿಸಬೇಕೆಂದು ದಿನಕ್ಕೆ ಹತ್ತಾದರೂ ಬಂದುಗಳಾಗುವ ಸಂಭವವಿದೆ.

ಮುಂದಿನ ಶತಮಾನದ ಮೊದಲ ದಶಕದ ವೇಳೆಗೆ ಒಂದು ನೂರಾದರೂ ಚೆರ್ನೋಬಿಲ್‌ಗಳಾಗುವ ಸಂಭವವಿದೆ.

ಒಟ್ಟಿನಲ್ಲಿ ಹೇಳುವುದಾದರೆ ಈಗ ನಾವು (ಮಾನವರು) ಪ್ರಗತಿ ಪಥದಲ್ಲಿ ನಡೆಯದೆ, ವಿಕೃತಿ ಪಥದಲ್ಲಿ ನಡೆಯುತ್ತಿದ್ದೇವೆ. ವಿಜ್ಞಾನಿಗಳ ಬುದ್ಧಿಮತ್ತೆ ಕೌಶಲ್ಯಗಳ ಬಗೆಗೆ ದುಸರಾ ಮಾತಿಲ್ಲವಾದರೂ, ಅಂತಹ ಜನ ಹಣ ಅಧಿಕಾರಗಳ

ನ್ನುಳ್ಳ, ಅಲ್ಪದೃಷ್ಟಿ ಹಾಗೂ ಕ್ರೂರ ಬುದ್ಧಿಯ ಬಹುರಾಷ್ಟ್ರೀಯ ಸಂಸ್ಥೆಗಳು ಮತ್ತು ಸರ್ವಾಧಿಕಾರೀ ರಾಜ್ಯಗಳ ಆಳರಸರ ಕಪಿಮುಷ್ಟಿಗೆ ಸಿಕ್ಕಿರುವುದು ಎಂತಹ ಸಂತಸದ ವಿಷಯ !

ಇನ್ನು ಭವಿಷ್ಯದ [ಫ್ಯೂಚರಾಲಜಿ ಅಲ್ಲ] ಮೇಲೆ ಹೇಳುವುದಾದರೆ ಈ ಎರಡ ರಲ್ಲಿ ಒಂದಾಗಬಹುದೆಂದು ನಿರೀಕ್ಷಿಸುತ್ತೇನೆ.

2006 ನೆಯ ವರ್ಷದ ವೇಳೆಗೆ ಅಥವಾ ಸ್ವಲ್ಪ 50 - 60 ವರ್ಷ ಹೆಚ್ಚು ಕಡಿಮೆ ಭಾರತೀಯನೊಬ್ಬನು ವಿಶ್ವದ ಬಲಶಾಲೀ ರಾಷ್ಟ್ರಗಳನ್ನು ನಡುಗಿಸಿ ಪ್ರಪಂಚ ದಲ್ಲೆಲ್ಲಾ ಧರ್ಮರಾಜ್ಯವನ್ನು ಸ್ಥಾಪಿಸುತ್ತಾನೆ. ನನ್ನ ಮಿತ್ರನೊಬ್ಬ ಯಾರದೋ ಮಾತುಕೇಳಿ ಧರ್ಮವನ್ನು ರಿಪೇರಿ ಮಾಡುವುದು ಸಾಧ್ಯವಿಲ್ಲ; ಅದು ಸದಾ ಕೆಟ್ಟದೇ ಎಂದು ವಾದಿಸುತ್ತಾನೆ. ನಾನು ಅದನ್ನು ಸಂಪೂರ್ಣವಾಗಿ ಒಪ್ಪುತ್ತೇನೆ. ಧರ್ಮ ವೆಂದರೆ ಹಾಗೆಂದು ಬೊಬ್ಬೆ ಹೊಡೆದು ಬಡಿದಾಡುವ ಕುಟಿಲರದಲ್ಲ, ಸನಾತನ ಧರ್ಮ ಸದಾ ಒಂದೇ. ಅದು ಸರಿಯಾಗಿಯೇ ಇದೆ. ಅದನ್ನು ಟೀಕಿಸುವವರು ಬೇಕಿದ್ದರೆ ತಮ್ಮನ್ನು ರಿಪೇರಿ ಮಾಡಿಕೊಳ್ಳಬಹುದು. ಇಲ್ಲದಿದ್ದರೆ ಕಾಲವೇ ಬಾಲಕೊಯ್ಯು ತ್ತದೆ.

ಇನ್ನೊಂದು ಷಾ ಕಲ್ಪನೆ. ಅದರಂತೆ ಈ ಶತಮಾನದ ಅಂತ್ಯದ ವೇಳೆಗೆ ಎಲ್ಲಯುದ್ಧ ಗಳನ್ನು ಕೊನೆಗೊಳಿಸಿ, ಶಾಂತಿ ಸ್ಥಾಪಿಸಲು ಹಲವಾರು ಅಂತಿಮ ಯುದ್ಧಗಳಾಗು ತ್ತವೆ. ಈ ವಿನಾಶಕಾರೀ ವ್ಯಾಪಾರವನ್ನು ತಪ್ಪಿಸಲು ವಿಜ್ಞಾನಿ, ತಂತ್ರ ಜ್ಞಾನಿಗಳೆಲ್ಲ ರನ್ನು ಮಾನವ ಕುಲದವರು ಹೇಳ ಹೆಸರಿಲ್ಲದಂತೆ ಮಾಡುತ್ತಾರೆ. ಹಾಗಾದಿತೇ ? ಸುಂದರ ಕನಸುಗಳು ನನಸಾಗುವುದು ಸಾಹಿತ್ಯದಲ್ಲಿ ಮಾತ್ರ.

ಇನ್ನೊಂದು ವಿಷಯ ಇಲ್ಲಿ ಪ್ರಸ್ತಾಪಿಸಬೇಕು. ಅದು ದುರ್ಯೋಧನವಾಣಿ; ನೀಚನಾದರೂ ವಾಚಾಳಿ ಅವನು ಹೇಳಿದನಂತೆ.

"ಕರ್ಣ, ನಿನ್ನ ಶಕ್ತಿಯನ್ನು ಈಗಿಂದೀಗಲೇ ಉಪಯೋಗಿಸದಿದ್ದರೆ ನಾವು ಉಳಿಯುವುದಿಲ್ಲ. ಇಂದು ಉಳಿದ ಮೇಲಲ್ಲವೇ ಅರ್ಜುನನನ್ನು ಮುಂದೆಂದೋ ಎದುರಿಸುವುದು. ಆಗ ನೋಡಿಕೊಂಡರಾಯ್ತು.

ಅಣು, ವಿದ್ಯುತ್, ಎಲೆಕ್ಟ್ರಾನಿಕ್, ಕೈಗಾರಿಕಾ, ಫ್ರೆಂಚ್, ರಷ್ಯನ್ ಕ್ರಾಂತಿ ಗಳಾಗಲೀ, ಅಮೆರಿಕ, ಭಾರತದ ಸ್ವಾತಂತ್ರ್ಯ ಯುದ್ಧಗಳಾಗಲೀ ಲೋಕಕ್ಕೆ ಶಾಂತಿ, ಸುಖ, ಸಮೃದ್ಧಿಗಳನ್ನು ತರಲಿಲ್ಲ.

ವಿಚ್ಛಿದ್ರಕಾರಿಗಳ, ಭಯೋತ್ಪಾದಕರ ಕೃತ್ಯಗಳು ಅಂತರರಾಷ್ಟ್ರೀಯವಾಗಿ ವಾಸ್ತವ ಸಂಗತಿಗಳಾಗಿವೆ.

ಇವರಿಷ್ಟೇ ಜನ ಮಾತ್ರ ಇಲ್ಲ. ಅವರಲ್ಲಿ ಒಬ್ಬರಾದರೂ ತಮ್ಮ ಉದ್ದೇಶ ವನ್ನು ಸಾಧಿಸಲಾಗಿಲ್ಲ. ಇದುವರೆಗಿನ ಯಾವ System ಅಥವಾ Antisystem ಗಳೂ ಫಲಕಾರಿಯಾಗಿಲ್ಲ.

ಆದುದರಿಂದ ಏನು ? ದೇವರಿದ್ದಾನೆ ನೋಡಿಕೊಳ್ಳೋಣ.

———




"ದಕ್ಷಿಣ ಗಂಗೋತ್ರಿಗಾರೂ ಹೋಗೋಣಾರೀ
ಲತಾ ಮಂಗೇಶ್‌ಕರ್ ಹಾಡು ಕೇಳಬಹುದು !"



# 21-ನೇ ಶತಮಾನ-ನನ್ನ ನಿರೀಕ್ಷೆ

—ಜಿ.ಎನ್.ಜಿ.

---

21-ನೇ ಶತಮಾನದ-ಸುಂದರ ಚಿತ್ರವನ್ನು ದೂರದರ್ಶನದಲ್ಲಿ ನೋಡಿ-ರೇಡಿಯೋಗಳಲ್ಲಿ ಕೇಳಿ-ಪೇಪರುಗಳಲ್ಲಿ ಓದಿ ತಲೆಕೆಡಿಸಿಕೊಳ್ಳದವನೇ ಪಾಪಿ ಅರ್ಥಾತ್ ನಾನೂ ಪಾಪಿ ಡಬ್ಬಲ್ ಪಾಪಿ. ಒಂದು-ನಾನೂ ನಿಮ್ಮಂತೆ ಒಬ್ಬ, ಎರಡನೆಯದು ನಾನು ಆ ಸುಭಿಕ್ಷ ಕಾಲದಲ್ಲಿ ಬದುಕಿರುವುದಿಲ್ಲವಲ್ಲ.

'Heard melodies are sweeter than those unheard' ಎಂದವನೊಬ್ಬ ಬೆಪ್ಪನೇ ಸರಿ. ಅವನೂ ಕನಸು ಕಂಡಿದ್ದರೆ ಅವನ ಅಪ್ಪನ ಗಂಟೇನು ಹೋಗುತ್ತಿತ್ತು ? ಒಂದೇ ರೀತಿ ಕನಸು ಕಾಣುವುದೂ dilirium- ಒಂದು ಥರಾ ಚೆನ್ನಾಗಿರುತ್ತೆ. ಅದಕ್ಕೆ ಎಲ್ಲರೂ ಕನಸು ಕಾಣೋದು.

ಒಂದು ರೀತಿ-ಹೆಚ್ಚಿದ ಸಂಬಳವನ್ನು ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್ ಗಳಲ್ಲಿ ಪ್ರತಿ ತಿಂಗಳು ಪಡೆದು ಅವುಗಳ ರಾಶಿಯೇ ಆಗಿದೆ. ಇನ್ನೂ ಆರು ವರ್ಷಕ್ಕೆ ಎರಡರಷ್ಟು ಆಗುವ ಆದಾಯದ ಕನಸು ಕಾಣುತ್ತಾ ಆ ಅಂದವಾದ ಪ್ರಶಸ್ತಿ ಪತ್ರಗಳನ್ನು (ಬಸ್ ಕಂಡಕ್ಟರ್ ಹಾಗೆ) ನಾಲಿಗೆ ಮೇಲೆ ಬೆರಳು ಆಡಿಸುತ್ತಾ ಎಣಿಸಿ-ಎಣಿಸಿ-ಕನಸು ಕಾಣುತ್ತಾ-ನಾಲಿಗೆ ಒಣಗಿಸಿಕೊಳ್ಳುವುದಿಲ್ಲವೇ ಹಾಗೆ, ಕನಸು ಕಾಣೋದಪ್ಪ; ಅದಕ್ಕೇನು 'ಕ್ಯೂ'ನಲ್ಲಿ ನಿಂತು ಟಿಕೆಟ್ಟು ತೆಗೆದುಕೊಳ್ಳಬೇಕೆ ? "ನೀವೇನು ಕನಸು ಕಾಣುತ್ತಿದ್ದೀರಾ ?" ಎಂದು ನಿಮ್ಮನ್ನು ಯಾರು ಕೇಳುತ್ತಾರೆ ? ಕನಸು ಕಾಣೋದಿಕ್ಕೆ ಸುಂಕ ಕೊಡಲು ಇದೇನು 21ನೇ ಶತಮಾನವೇ ?

ಹೀಗೆ-ಕನಸು ಕಾಣುತ್ತಾ ಇದ್ದಾಗ ಮಗಳು ಬಂದು "ಊಟಕ್ಕೆ ಬರಬೇಕಂತೆ" ಎಂದು ಕರೆದಳು.

"21-ನೇ ಶತಮಾನದಲ್ಲಿ-ಊಟ ಎಲ್ಲಿರುತ್ತಮ್ಮಾ ? Every thing through tablets. ತಟ್ಟೇನೂ ಇರೋಲ್ಲ. "ಎಲೆ" ಎಲೆ ಎಲ್ಲಿರುತ್ತೆ ? ಕಾಡೇ ಇರೋಲ್ಲ, Every thing simple very simple" ಎಂದೆ.

"ಅಪ್ಪನ್ನ-ನೀನೇ ಕರಿ-ಮಾಮೂಲು ಹುಚ್ಚುಚ್ಚು ಎಂದು ಕೂಗಿದಳು.

ಆಗ ಅವರಮ್ಮ ಸೌಟು ಸಮೇತ ಹೊರಗೆ ಬಂದಾಗ ನನ್ನ fantacyಗೆ ತುಂಡು ಬಿತ್ತು.

ಆದರೆ-ನನ್ನನ್ನು ಕಾಡ್ತಾ ಇರೋ ಸಮಸ್ಯೆ-ಆಗ ಜನ ನಿಜಕ್ಕೂ ಮಾತ್ರೆಗಳಲ್ಲಿ ಹೊಟ್ಟೆ ತುಂಬಿಸಿಕೊಳ್ಳುತ್ತಾರೋ-ಗೆಡ್ಡೆ ಗೆಣಸು ತಿನ್ನುತ್ತಾರೋ ಅಂತ ಸೌಟುಗಳೂ ಅದನ್ನು ಬಿಡಿಸಲಾರವು. ಯಾಕೆಂತೀರೋ-ಈಗಲೇ ಈ 20-ನೇ ಶತಮಾನದಲ್ಲೇ 'Breast milk ಏ bestಊ' - ಬೇಬಿಗಳಿಗೆ-ಬಾಟಲು ಹಾಲು ಬೇಡಾ ಎಂದು-ಒಂದು ರೀತಿ ಸಿಗರೇಟು ಪ್ಯಾಕೆಟುಗಳ ಮೇಲೆ ಹಾಕಿದ ಹಾಗೆ Statutory warning ನ ಹಾಲಿನ ಡಬ್ಬಿಗಳ ಮೇಲೆ ಹಾಕಿ ನಮ್ಮ ಅಜ್ಜೀ ಕಾಲಕ್ಕೆ ನಮ್ಮನ್ನು ತಳ್ಳುತ್ತಾ ಇಲ್ಲವೇ ? ಅಂದ ಮೇಲೆ 21-ನೇ ಶತಮಾನಕ್ಕೆ ಹೋಗೋದು ಎಂಬುದು ಒಂದಂ ರೀತಿ retrograde motion ಇರಬೇಕು ಎಂದು ನನ್ನ ಗುಮಾನಿ.

Planetory motion ಅದು rotary ಆಗಿರಲಿ revolutionary ಆಗಿರಲಿ ಅದು circular motion ತಾನೆ of course ಧೂಮಕೇತುಗಳನ್ನು ಬಿಟ್ಟು. ಎಲ್ಲ ಕಾಲಕ್ಕೂ ಈ ಧೂಮಕೇತುಗಳು ಇದ್ದೇ ಇರುತ್ತವಲ್ಲ. ಈ ವೃತ್ತ ಪರಿಭ್ರಮಣೆಯಿಂದಲೇ-ಹಗಲು ರಾತ್ರಿ-ಕಷ್ಟ-ಸುಖ. ಭೂಮಿನೂ ಒಂದು ಗ್ರಹ. ಅದರದ್ದೂ ವೃತ್ತ ಪರಿಭ್ರಮಣೆ. ಭೂಮಿ ಮೇಲಿನ Progress ಕೂಡಾ ವೃತ್ತ ಪರಿಭ್ರಮಣೆನೇ ಆಗಬೇಕು. ಆದ್ದರಿಂದ Starting Point ಗೆ ಬರಲೇಬೇಕು. ಈ Progress ನ Angular velocity ಇಷ್ಟು ಹೆಚ್ಚೂಂತ ನನಗೆ ತಿಳಿದಿರಲೇ ಇಲ್ಲ. ಈ ಪಂಜಾಬು ಗಲಾಟೆ-ಗಡಿ ವಿವಾದ ಗುಜರಾತು - ಹೀಗೆ ಇಲ್ಲಿ, ಜಗತ್ತಿನಲ್ಲಿ ನಡೀತಾ ಇರೋ antics ನ angularities ನ ನೋಡಿದ ಮೇಲೆ ಈ angular motion ಯಾಪಾಟೀ accelerated ಆಗಿದೆಯೆಲ್ಲಾ ? ಎಂದು ದಿಗ್ಭ್ರಮೆಯಾಗಿದೆ.

ಒಬ್ಬ ದಾರ್ಶನಿಕ ಹೇಳಿದ್ದನಂತೆ "ಪ್ರಪಂಚ ಹೀಗೇ ಮುಂದುವರೆದರೆ-ಒಂದು ದಿನ-ಜನ ಎಲ್ಲಾ ಬಿಟ್ಟು-ಪುನಃ ಕಲ್ಲು ದೊಣ್ಣೆಗಳಿಂದ ಹೊಡೆದಾಡುತ್ತಾರೆ" ಇದು–Progress ಎಂಬುದು circular motion ಎಂಬುದನ್ನು ತೋರಿಸುವುದಿಲ್ಲವೇ ?

ಈ ಪರಮಾಣು ಬೀಜದ ಸುತ್ತಲೂ–ಸುತ್ತುವ ಎಲೆಕ್ಟ್ರಾನುಗಳ ಚಲನೆಯಲ್ಲಿ ಒಂದು ರೀತಿ Planetory motion ಏ. ನೋಡಿ ಈ nuclear ನ ಶಕ್ತೀನ ಸೂರ್ಯನ ಶಕ್ತೀನ ಅವುಗಳ ಸುತ್ತಲೂ ಎಲೆಕ್ಟ್ರಾನುಗಳು ಗ್ರಹಗಳು ಹೇಗೆ ಸುತ್ತುತ್ತವೆ. ಯಾವಾಗಲೂ ಒಬ್ಬ ನಾಯಕನ ಸುತ್ತ ಪ್ರದಕ್ಷಿಣೆ ಹಾಕೋದು–law of nature. ಆದರೂ ಕೆಲವು ಎಲೆಕ್ಟ್ರಾನುಗಳು ಆಗಾಗ ತಪ್ಪಿಸಿಕೊಂಡು - Atom ನ charge ಮಾಡುವುದಿಲ್ಲವೇ ಎಲೆಕ್ಟ್ರಾನುಗಳು ಹೆಚ್ಚಾಗಿ ಬಂದು ಸೇರಿದಾಗಲೂ atom charge ಆಗುತ್ತೆ. ಹಾಗೇನೆ - ಪಾರ್ಟಿ ಬಿಟ್ಟು ಪಾರ್ಟಿಗೆ ಸೇರಿ ಪಾರ್ಟಿನ charge ಮಾಡುವುದಿಲ್ಲವೇ ಜನ. ಆದರೆ "ರಾಣೀ ಜೇನಿ"ನ ಥರಾ ನಾಯಕನ್ನ ಇಟ್ಟಿರೋಲ್ಲವೇ. ಥೂ ಥೂ ಇದು ಎಲ್ಲೆಲ್ಲೋ ಹೋಯಿತು.

ಆದರೂ ಈ ಎಲೆಕ್ಟ್ರಾನುಗಳ ಹಾವಳಿ ಏನೂಂತೀರಾ. ಈ ಶತಮಾನದಲ್ಲಿ ಅಂದ ಹಾಗೆ–Nucleus "ನಾನೇನು ಕಡಿಮೇನೆ" ? ಒಂದು ಸಾರಿ disintegrate ಮಾಡಿನೋಡಿ" ಎನ್ನುತ್ತೆ. 1945ರಲ್ಲಿ ಜಪಾನಿನಲ್ಲಿ ಒಂದು ಸಾರಿ ನೋಡಿದ್ದು ಸಾಲದೆ ? ಆದರೂ ನೋಡೆ ಬಿಡೋಣ ಈ Nucleus ನ ಜಂಭಾನ ? ಎಂದು ಅದರ ಬೆನ್ನು ಬಿಟ್ಟೇ ಇಲ್ಲ ವಿಜ್ಞಾನಿಗಳು.

ಇದು ಹೀಗೇ ಆದರೆ ಮುಂದೇನು ? ಅದನ್ನ ಆಗ ಇದ್ದೋರು ಯೋಚನೆ ಮಾಡ್ತಾರೆ ಬಿಡಿ. ಆಗ ಜನಕ್ಕೆ ಯೋಚನೆ ಮಾಡೋದು ಬಿಟ್ಟು ಬೇರೇ ಕೆಲಸವೇ ಇರೋಲ್ಲ. ಯಾಕೇಂತೀರೋ ಎಲ್ಲಾ ಎಲೆಕ್ಟ್ರಾನು ಪ್ರಭಾವ. Button ಒತ್ತಿದರೆ ಸಾಕು ಬೇಕಾದ್ದು table ಗೇ ಬರುತ್ತೆ ಅಂತಿರಾ ?

ನಿಮಗೆಲ್ಲೋ ಭ್ರಾಂತು ಕಣ್ರೀ ನನಗೇನೋ ಈಗಲೇ ನೀರಿಗೆ - ಇಂಥ ನಕ್ಕೆ ಗಾಳಿಗೆ (ಶುದ್ಧ) ಅದಕ್ಕೆ ಇದಕ್ಕೆ ಬರ. ಆಗ ಈ ಎಲೆಕ್ಟ್ರಾನ್ ಶಿಶುಗಳಾದ ಆಧುನಿಕ ಸಲಕರಣೆಗಳನ್ನೆಲ್ಲಾ ಅಂದವಾಗಿ Showcase ನಲ್ಲಿ ಇಟ್ಟು ರಬ್ಬರು - ಕಾಗದ Plastic - ಅದೂ ಇದೂ ಸುಟ್ಟು ಮಡಕೇಲಿ - ಗೆಡ್ಡೆ ಗೆಣಸು ಬೇಯಿಸಿ ತಿಂದು ಮಕ್ಕಳನ್ನ ಕಟ್ಟಿಕೊಂಡು ಕಾಲು ನಡಿಗೇಲಿ ಹೋಗಿ ಮ್ಯೂಸಿಯಂಗಳಲ್ಲಿಟ್ಟಿರೋ ಕಾರು ವಿಮಾನ ಹಡಗು ಕ್ಷಿಪಣಿಗಳನ್ನು ಉಪಗ್ರಹಗಳನ್ನ ನೋಡೋದಿಕ್ಕೆ ಹೋಗ್ತಾರೆ ಜನ ವೀಕೆಂಡಿನಲ್ಲಿ (week end) ಅನಿಸುತ್ತೆ.

"ಇವನಿಗೆಲ್ಲೋ ಹುಚ್ಚು ಕಣ್ರೀ ಪ್ರಪಂಚ ನಾಗಾಲೋಟದಿಂದ ಮುಂದು ವರೀತಾ ಇದ್ದರೆ ನಾವು ಏನೇನು ಸುಖ ಕಾಣಬಹುದು - ಅದರ ವಿಷಯ ಯೋಚಿಸೋದು ಬಿಟ್ಟು - ಶುಭ ನುಡಿಯೋ ಮದುವಣಗಿತ್ತಿ ಎಂದರೆ... ಇದೆಲ್ಲೋ ಹುಚ್ಚು" ಎಂತಿರಾ.

ಆಗ ನಾನಂತೂ ಇರೋಲ್ಲ - ನೀವೇನಾದರೂ ಇದ್ದರೆ ಯಾರು ಹುಚ್ಚರೂ ಅಂತ ನಿಮಗೆ ಬೆಳಕಾಗುತ್ತೆ, ಆಗ. Wish you all the best.

---

## ಮಳಲು ಸೇವೆ

ತ್ರೇತಾಯುದಲ್ಲಿ ಶ್ರೀರಾಮಚಂದ್ರ ಲಂಕೆಗೆ ಸೇತುವೆ ಕಟ್ಟಿಸುತ್ತಿದ್ದ. ಒಂದು ಪುಟ್ಟ ಅಳಿಲು ಈ ಸೇತುವೆ ಕಟ್ಟಲು ತನ್ನ ಕೈಲಾದ ಸಹಾಯ ಮಾಡುತ್ತಿತ್ತು. ಮರಳಿನಲ್ಲಿ ಹೊರಳಾಡಿ ಅಲ್ಲಿ ಅಂಟುಕೊಂಡಿದ್ದ ಮರಳುಕಣಗಳನ್ನು ಸೇತುವೆ ಕಟ್ಟುವವರಿಗೆ ಕೊಡುತ್ತಿತ್ತು. ಈ ಅಳಿಲು ಸೇವೆಯಿಂದ ಸಂತೃಪ್ತನಾದ ಶ್ರೀರಾಮ ಅಳಿಲು ಮೇಲೆ ಕೈ ಆಡಿಸಿದ. ಆಗ ಮೂಡಿದ ನಾಲ್ಕು ಗೆರೆಗಳು ಈಗಲೂ ಕಾಣಬಹುದು.

ಕಲಿಯುಗದಲ್ಲಿ ಘನ ಸರ್ಕಾರ ಸೇತುವೆ ಕಟ್ಟಲಾರಂಭಿಸಿತು. ಕಂಟ್ರಾಕ್ಟರ್ ಅಳಿಲಪ್ಪನಿಗೆ ತಾನೂ ಸೇವೆ ಸಲ್ಲಿಸಬೇಕು ಎನ್ನಿಸಿತು. ಅಳಿಲು ಮರಳು ಕಣ ಮಾತ್ರ ಹೊತ್ತು ತಂದಿದ್ದರೆ ಅಳಿಲಪ್ಪ ಮೂಟೆ ಮೂಟೆ ತುಂಬಾ ಮರಳು ತುಂಬಿಕೊಂಡು ಹೋಗಿ ಸೇತುವೆ ಕಟ್ಟುವವರಿಗೆ ಕೊಟ್ಟ. ಅಳಿಲು ಮರಳು ಹಾಕಿ ಬರೀಕೈಯಲ್ಲಿ ಹಿಂದೆ ಹೋಗುತ್ತಿತ್ತು. ಆದರೆ ಅಳಿಲಪ್ಪ ತಾನು ತಂದುಕೊಟ್ಟ ಮರಳಿನ ಬದಲು ಅಷ್ಟೇ ಗಾತ್ರದ ಸಿಮೆಂಟ್ ಹೊತ್ತುಕೊಂಡು ಹೋಗಿ ಅಧಿಕಾರಿಗಳ ಸ್ವಂತ ಮನೆಗೆ ಬಳಸುತ್ತಿದ್ದ. ಅಧಿಕಾರಿಗಳು ಸುಪ್ರೀತರಾಗಿ ಇವನ ಬಿಲ್‌ಗಳ ಮೇಲೆ ನಾಲ್ಕು ಗೆರೆ ಎಳೆದು 'ಮಂಜೂರಾಗಿದೆ' ಎಂದು ಬರೆದರು. ಅಳಿಲಪ್ಪನ ಮುಖದ ಮೇಲೆ ಸುಖ ಜೀವನದಿಂದ ಬಂದಿರುವ ನಾಲ್ಕು ಗಲ್ಲಗಳನ್ನು ಈಗಲೂ ನೋಡಬಹುದು.

—ಬಾಗೂರು ಚಂದ್ರು



# ಮುಂದಿನ ಶತಮಾನದಲ್ಲಿ

—ಅಪ್ರಸ್ತುತ.

---

೧. ಮುಂದಿನ ಶತಮಾನದಲ್ಲಿ Landscape

ವಿಶ್ವದ ಎಲ್ಲೆಡೆಯಲ್ಲಿಯೂ ಗಗನಚುಂಬಿಗಳಾದ ಕಟ್ಟಡಗಳು. ನ್ಯೂಟ್ರಾನ್ ಬಾಂಬ್ ಯುದ್ಧದಲ್ಲಿ ವಿಶ್ವವೆಲ್ಲಾ ನಿರ್ಜನ. ಕಂಪ್ಯೂಟರ್‌ಗಳು, ವಿಮಾನಗಳು, ರಾಕೆಟ್‌ಗಳು, ಕಾರ್ಖಾನೆಗಳ ತುಂಬಾ ಜಿರಲೆಗಳು, ಮುಂದಿನ ಶತಮಾನ ಜಿರಲೆಗಳ ಯುಗ–ಶಾಂತಿಯುಗ.

೨. ಮುಂದಿನ ಶತಮಾನದಲ್ಲಿ ಉಳಿಯುವ ಮಾನವರು

ಆ ವೇಳೆಗೆ ಭಾರತದಲ್ಲಿ ಎಂಬತ್ತೈದು ಕೋಟಿ ಜನರಿರುತ್ತಾರೆ. ಕೋಟಿಗೊಬ್ಬ ಜ್ಞಾನಿ ಎಂದು ಲೆಕ್ಕ ಹಾಕಿದರೆ ಶಾಂತಿ ಸಾಧನೆಗಾಗಿ ನಡೆಯುವ ಕೊನೆಯ ಯುದ್ಧದಲ್ಲಿ ಉಳಿಯುವವರು ಎಂಬತ್ತೈದೇ ಜನ. ಆಕಸ್ಮಿಕವಾಗಿ ಯೋಗಿಗಳು (ಹತ್ತು ಹದಿನೈದು ಜನ) ಉಳಿದರೆ ಅಪ್ಸರೆಯರು ಬರುವ ಸಾಧ್ಯತೆಯೇ ಇಲ್ಲದೆ ಅವರೂ ಯೋಗವನ್ನು ಕೈಬಿಟ್ಟು ಬ್ರಹ್ಮಜ್ಞಾನದತ್ತ ಮನಸ್ಸು ಮಾಡುತ್ತಾರೆ.

೩. ಮುಂದಿನ ಶತಮಾನದಲ್ಲಿ ಎಲ್ಲಿ ಏನಾದರೂ—ಭಾರತದಲ್ಲಿ ಸುಭಿಕ್ಷ, ಶಾಂತಿ, ಸಮೃದ್ಧಿ. ಅಪಘಾತಗಳ ಸುಳಿವೇ ಇಲ್ಲ, ಏಕೆಂದರೆ ೨೦೦೧ನೆಯ ಇಸ್ವಿಯಲ್ಲಿ ಸುಗ್ರೀವಾಜ್ಞೆ ಹೀಗೆಂದು ಹೇಳುತ್ತದೆ

ಅ—ಅಣುಸ್ಥಾವರ, ವಿಮಾನ, ಹಡಗು, ರೈಲು, ದೋಣಿ, ಲಾರಿ, ಕಾರು, ಸ್ಕೂಟರು, ಮೊಪೆಡ್, ಸೈಕಲ್, ಈ ಯಾವುದರಿಂದಲಾಗಲಿ ಅಪಘಾತವಾಗ ಕೂಡದು.

ಆ—ವಾರ್ಷಿಕ ತಲಾ ಆದಾಯ ಪ್ರತಿವರ್ಷ ಶೇ. ೯೫ರಷ್ಟು GNP—ಶೇ. ೭೫ ರಷ್ಟು ಏರುತ್ತಾಹೋಗಬೇಕು.

ಇ—ಈ ಸುಗ್ರೀವಾಜ್ಞೆ ಶೇ. ೧೦೦ ಪರಿಪಾಲಿತವಾಗುತ್ತಿದೆ.

ಈ—ಅಂತಿಮ ಕದನದಿಂದ ಇಲ್ಲಿ ಯಾರೂ ಸಾಯಕೂಡದು.

೪. ಪತ್ರಿಕೆಗಳಲ್ಲಿ ಸುದ್ದಿ ಸ್ವಾರಸ್ಯ, ವಿಚಿತ್ರ, ಆದರೆ ನಿಜ ಎಂಬ ಶೀರ್ಷಿಕೆಗಳಡಿ ಬರುವ ಸುದ್ದಿಗಳ ಸ್ಯಾಂಪಲ್‌ಗಳು

ಅ—ಈ ಊರಿನ ಶಾಲಾ ಉಪಾಧ್ಯಾಯರಿಗೆ ಓದಲು ಬರುವುದರಿಂದ ಅವರನ್ನು ಅಮಾನತಿನಲ್ಲಿಡಲಾಯ್ತು.

ಆ—ಕುಮಾರಿ ವಿಭ್ರಾಂತಿಯು ಫಾಷನ್ ಎಂದು ಹದಿನಾಲ್ಕು ಮೊಳ ಸೀರೆಯನ್ನುಟ್ಟಿದ್ದರಿಂದ, ಅಶ್ಲೀಲ ನಡೆತೆಗಾಗಿ ಅವಳ ಮೇಲೆ ಪೋಲೀಸರು ಮೊಕದ್ದಮೆ ಹೂಡಿದ್ದಾರೆ.

ಇ—ಎ, ಎಕ್ಸ್, ಓ ಮೊದಲಾದ ಯಾವ ದರ್ಜೆಗೂ ಸೇರದ ಯುವ ದರ್ಜೆಯ ಚಿತ್ರ 'ಸಭ್ಯತಾ'ದ ಪ್ರಿಂಟುಗಳನ್ನು ಮುಟ್ಟಗೋಲು ಹಾಕಲಾಗಿದೆ. ಒಂದೂ ರೇಪ್, ಫೈಟ್, ಕ್ಯಾಬರೆ ಸೀನುಗಳಿಲ್ಲದ ಈ ಚಿತ್ರ ಸಾರ್ವಜನಿಕರ ಶಾಂತಿಯನ್ನು ಕಲಕಿ, ಕೋಪೋದ್ರೇಕಕ್ಕೆ ಕಾರಣವಾಗುವುದೆಂದು ಗಣ್ಯರು ದೂರು ಕೊಟ್ಟಿದ್ದರಿಂದ ಈ ಕ್ರಮ ಕೈಗೊಳ್ಳಲಾಗಿದೆ.

ಈ—ತಮ್ಮ ಭಾಷೆ, ಪ್ರದೇಶ, ಪ್ರಭಾವ, ಬೆಂಬಲಗಳಿಲ್ಲದೆ ಕೇವಲ ಪ್ರತಿಭೆಯಿಂದ ಸೃಷ್ಟಿಸಿದ ಪುಸ್ತಕದ ಪ್ರಕಟಣೆ ವಿರೋಧಿಸಿ ರಾಜ್ಯಾದ್ಯಂತ ಬಂದ್‌ಗೆ ಕರೆ ನೀಡಲಾಗಿದೆ.

ಉ—ಲಿಖಿತ ಪರೀಕ್ಷೆ, ಮೌಖಿಕಗಳಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದ್ದರಿಂದ ತನಗೇ ಕೆಲಸ ಕೊಡಬೇಕೆಂದು ವಾದಿಸಿದ ಅಪರೂಪ ಘಟನೆ ಇಲ್ಲಿ ನಡೆಯಿತು. ಆಪಾದಿತನು ಈಗ ಪೋಲೀಸ್ ವಶದಲ್ಲಿದ್ದಾನೆ.

ಊ—ಕ್ಷಾಮ, ಡಾಮರ, ಅತಿವೃಷ್ಟಿ, ಗಲಭೆಗಳಿಲ್ಲದ ದುಷ್ಟ ರಾಜ್ಯವೊಂದು ಪತ್ತೆಯಾಗಿದೆ. ಪರಿಸ್ಥಿತಿಯನ್ನು ಹೀಗೇ ಕೈಬಿಟ್ಟರೆ ರಾಷ್ಟ್ರಾದ್ಯಂತ ಶಾಂತಿನೆಲಸುವ ಭೀತಿ ಹರಡುತ್ತದೆ.

ಕ—ಇತ್ಯಾದಿ

೫. ಮುಂದಿನ ಶತಮಾನದಲ್ಲಿ ಸಾಹಿತ್ಯ

ಮೈಕ್ರೋ ಫಿಲ್ಮ್‌ಗಳಲ್ಲಿ ಉಳಿದ ಪಳೆಯುಳಿಕೆ

೬. ಮುಂದಿನ ಶತಮಾನದಲ್ಲಿ ಕಲೆ

ಕ ಕೋತ್ವ ಕೊ.

೭. ಮುಂದಿನ ಶತಮಾನದಲ್ಲಿ ವ್ಯವಸಾಯ

ಕಂಪ್ಯೂಟರುಗಳೇ ಮಾಡುತ್ತವೆ.

೮. ಮುಂದಿನ ಶತಮಾನ

ಮುಂದಿನದು ಇಪ್ಪತ್ತೊಂದನೆಯ ಶತಮಾನ ಎನ್ನುವುದು ಸಂಬಂಧಿಸಿದ್ದು; ಭಾರತೀಯವಾಗಿ ಹೇಳುವುದಾದರೆ ಇಂದು ಕಲಿಯುಗದ ಐವತ್ತೊಂದನೆ ಶತಮಾನ ಮುಂದಿನದು ಐವತ್ತೆರಡನೆಯ ಶತಮಾನ.

೯. ಮುಂದಿನ ಶತಮಾನದಲ್ಲಿ ಏನಾಗುವುದೆಂದು ಆಗ ತಿಳಿದೇ ತಿಳಿಯುತ್ತದೆ. ಇಂದೇಕೆ ಅವಸರ !





# ಇಪ್ಪತ್ತೊಂದರ ಹೊಸ್ತಿಲಲ್ಲಿ

—ಚಂಪಾ

---

ಅದೊಂದು ಸುಂದರ ಸಂಜೆ. ಬೆಳಿಗ್ಗೆ ಬಿದ್ದ ಮಳೆಯಿಂದ ಶುಭ್ರವಾಗಿರುವ ಪರಿಸರ. ನಲ್ಲಿಯಲ್ಲಿ ಹರಿಯುತ್ತಿರುವ ನೀರಿನ ಸುಳುಸುಳು ಶಬ್ದ. ಈ ಶಬ್ದ ತಂದ, ಕೆಳಗಿನಿಂದ ನೀರು ಹೊರಬೇಕಾಗಿಲ್ಲ, ಎನ್ನುವ ನೆಮ್ಮದಿ. ಜಲಾಶಯಗಳು ತುಂಬುತ್ತಿವೆ ಎನ್ನುವ ಶುಭ ಸಮಾಚಾರವನ್ನು ಹೊತ್ತು ತಂದಿರುವ ಪತ್ರಿಕೆ. ಆ ಪತ್ರಿಕೆಗಳ ಪುಟ ತುಂಬುವ ಹೇಳಿಕೆ ಕೊಡುವ ಮಂತ್ರಿಗಳ, ವಿರೋಧಿ ನಾಯಕರಿಗೆ ಕಡ್ಡಾಯ ರಜ. ಅಷ್ಟೇ ಏಕೆ ಪಂಜಾಬಿನಲ್ಲಿ 48 ಗಂಟೆಗಳಲ್ಲಿ ಕೇವಲ ಒಂದೇ ಒಂದು ಕೊಲೆ. ಸ್ವರ್ಗದಲ್ಲಿ ದೇವರು ಭೂಮಿಯಲ್ಲಿ ಶಾಂತಿ ಎನ್ನುವ ಹೇಳಿಕೆ ನೆನಪಗೆ ತರುವ ಅಪರೂಪದ ಕ್ಷಣ.

ಈ ಖುಷಿಯಲ್ಲಿ ಬರಲಿರುವ ಇಪ್ಪತ್ತೊಂದನೆಯ ಶತಮಾನ, ಆಗ ಹರಿಯುವ ಹಾಲು - ಜೇನುಗಳ ಹೊಳೆ, ನಾರಿ, ಮೈಕ್ರೋಚಿಪ್, ಪರ್ಟ್ ಚಾರ್ಟ್‌ಗಳ ಅದ್ಭುತ ಪ್ರಪಂಚದ ಬಗೆಗೆ ಕನಸು ಕಾಣುತ್ತಿದ್ದೆ. ಅಷ್ಟರಲ್ಲಿ ಮೂರ್ತಿ ಬಂದ.

ನನ್ನ ಗೆಳೆಯ ಮೂರ್ತಿ ಉದ್ದಿನವಡೆಯಲ್ಲಿ ಮಧ್ಯದ ತೂತು ಮಾತ್ರ ಕಾಣುವವನು. ಗಾಳಿಯಲ್ಲಿ ಸುಂದರ ಗೋಪುರಗಳನ್ನು ಕಟ್ಟಿಕೊಂಡಾದರೂ ಜನ ಸುಖ ಪಡುತ್ತಾರೆ ಎಂದು ಹೇಳುತ್ತಾರೆ. ನನಗೆ ಅನ್ನಿಸುವುದು, ಮೂರ್ತಿ ಏನಾದರೂ ಮನಸ್ಸಿನಲ್ಲೇ ಗೋಪುರ ಕಟ್ಟಿಕೊಂಡರೂ, ಆ ಗೋಪುರ ನೋಡಿ ಸುಖಿಸುವ ಬದಲು ಕಂಟ್ರಾಕ್ಟರ್ ಆ ಗೋಪುರ ಕಟ್ಟಿದ್ದರಲ್ಲಿ ಮೋಸಮಾಡಬಹುದು ಅಥವ

ಕಾರ್ಪೊರೇಷನ್ ಅದಕ್ಕೇ ಹೆಚ್ಚಿಗೆ ಕಂದಾಯ ಹಾಕಬಹುದು ಎಂದು ಪರಿತಪಿಸುತ್ತಾನೇನೋ. ಮೂರ್ತಿ ಹುಟ್ಟಿನಿಂದಲೇ ನಿರಾಶಾವಾದಿ ಎಂದು ಗೊತ್ತಿದ್ದರೂ, ಅಂದಿನ ನನ್ನ ಉತ್ಸಾಹದ ಮನೋಭಾವದಿಂದಲೇ

'ಏನಯ್ಯ ಇನ್ನು 14 15 ವರ್ಷದಲ್ಲಿ 21ನೇ ಶತಮಾನ ಬಂದು ಬಿಡುತ್ತಲ್ಲಯ್ಯ fantastic ಅಲ್ಲವಾ' ಎಂದು ಕೇಳಿದೆ.

ಮೂರ್ತಿ ಒಂದು ಎಂಟು ಅಂಗುಲ ಉದ್ದದ ನಿಟ್ಟುಸಿರು ಬಿಟ್ಟ.

'ಏಕಯ್ಯ ಹೀಗೆ ಮುಖ ಹಿಂಡಿಕೋತಿಯಾ ? ಪ್ರಗತಿ ನಿನಗೆ ಇಷ್ಟವಿಲ್ಲವೇ ನೋಡು ಈಗ 15 ವರ್ಷದಲ್ಲಿ ಎಷ್ಟು ಪ್ರಗತಿಯಾಗಿದೆ' ಎಂದು ಹೇಳಿದೆ.

'ಏನಪ್ಪ ಪ್ರಗತಿ ಕಡ್ಲೆಕಾಯಿ ಎಣ್ಣೆ ರೇಟ್...... ಮೂರ್ತಿಗೆ ಅಳುವುದಕ್ಕೆ ಯಾವಾಗಲೂ ಏನಾದರೂ ಕಾರಣವಿರುತ್ತದೆ.

'Don't be silly ಕಡ್ಲೆಕಾಯಿ ಎಣ್ಣೆ ರೇಟ್ ಏರಿದರೆ ನಿನಗೆ ಡಿ.ಎ. ಜಾಸ್ತಿ ಆಗುತ್ತೆ. ಅಲ್ಲದೆ ಹಿಂದಿನ ಕಾಲದ ಬೆಲೆ ಜ್ಞಾಪಿಸ್ಕೋಳೋದು ವಯಸ್ಸಾದವರ ಮುಖ್ಯ ಹವ್ಯಾಸ, ನಿನಗಿನ್ನು ಅದಕ್ಕೆ ಬೇಕಾದಷ್ಟು ಕಾಲವಿದೆ. ನೀನು Magazine buff ತಾನೆ. ಈಗ 15 ವರ್ಷದ ಹಿಂದಿನ ಪರಿಸ್ಥಿತಿ ನೋಡು. ಆಗ ಇದ್ದಿದ್ದು ಒಂದೋ ಎರಡೋ ಮ್ಯಾಗಜೀನ್. ಈಗ ನಿನಗೆ ಎಷ್ಟು ಮ್ಯಾಗಜೀನ್ ಸಿಗುತಾ ಇದೆ. ಕನ್ನಡದಲ್ಲೇ ಎಷ್ಟೊಂದು ಬಂದಿವೆ'

'ಅದೇ ನೋಡು ಹೋದವಾರ ಅಣುಯುದ್ಧದ ಪರಿಣಾಮ ಅನ್ನೋ ಲೇಖನ ಓದಿ ಮೂರು ರಾತ್ರಿ ನಿದ್ದೆ ಬರಲಿಲ್ಲ. ಸ್ವಲ್ಪ ಸುಧಾರಿಸಿ ಕೊಳ್ಳೋದರಲ್ಲಿ ಏಡ್ಸ್ ಮೇಲೆ ಈಗ ಮೂರು ಪೇಜ್ ಆರ್ಟಿಕಲ್ ಬಂದಿದೆ. ಇನ್ನು ಒಂದು ವಾರ ನಿದ್ದೆಯಿಲ್ಲ'

ಪ್ರಗತಿಗೆ ನಾನು ತೆಗೆದುಕೊಂಡ ಉದಾಹರಣೆ ಸರಿಯಾಗಲಿಲ್ಲ ಎನಿಸಿತು. ಮೂರ್ತಿ ಟಿವಿ ಭಕ್ತ. ರಾತ್ರಿ ಹನ್ನೊಂದುವರೆವರೆಗೂ ಎಲ್ಲಾ ಕಾರ್ಯಕ್ರಮ ನೋಡುತಾನೆ..

'ಅಲ್ಲಯ್ಯ ಈಗ 5 ವರ್ಷದ ಹಿಂದೆ ಟಿವೀ ನೇ ಇರಲಿಲ್ಲ. ಈಗ ದಿನಾ ಸತ್ಯಜಿತ್‌ರೇ, ಬುನಿಯಾದ್, ಸೀಕ್ರೆಟ್ಸ್ ಆಫ್ ದಿ ಸೀ, ಕ್ರಿಕೆಟ್ ಮ್ಯಾಚ್, ನ್ಯಾಮ್ ಸಮ್ಮೇಳನ ನಿನ್ನ ಮನೆಗೆ ಬರುತ್ತಲ್ಲ. ಇದು ಪ್ರಗತಿ ಅಲ್ಲವೇ ?'

'ನೀನು ಹೇಳೋ ಕಾರ್ಯಕ್ರಮ ಬರುತ್ತೇ ನಿಜ. ಆದರೆ ನೋಡು. ಈಗ ನನ್ನ ಮಕ್ಕಳಿಗೆ ರಸನಾ, ಫ್ರೈಯಾಮ್ಸ್, ಮ್ಯಾಗಿನೂಡಲ್ಸ್‌ಗಳೇ ಸ್ವರ್ಗ ಆಗಿದ್ದೇ ಬೇಲದ ಹಣ್ಣಿನ ಪಾನಕ, ಸಂಡಿಗೆ, ಕೋಡುಬಳೆ ನೋಡಿ ಮುಖ ಸಿಂಡರಿಸಿಕೋತವೆ' ಮೂರ್ತಿಯ ಉತ್ತರ ಸಿದ್ಧವಾಗಿತ್ತು.

ಉದಾಹರಣೆಗಳು ಮೂರ್ತಿ ಮುಂದೆ ಪ್ರಯೋಜನವಿಲ್ಲ. ನೇರವಾಗಿ ವಿಷಯಕ್ಕೇ ಬರಬೇಕು ಎಂದು 'ಈಗಾಗಲೇ ಇಷ್ಟೊಂದು ಪ್ರಗತಿ ಆಗಿದೆ. ಇನ್ನು 21ನೇ ಶತಮಾನಕ್ಕೆ ಹೋದರೆ fair societyಗೆ ಹತ್ತಿರವಾಗುತ್ತೇವೆ. ಕಂಪ್ಯೂಟರ್, ಟೆಕ್ನಾಲಜಿ, ಮ್ಯಾನೇಜ್‌ಮೆಂಟ್‌ನಿಂದ ಹೊಸ ಅವಕಾಶ ಸಿಗುತ್ತೆ ಅಂತ ಒಪ್ಪಿಕೋತೀತಾನೆ' ಎಂದು ಕೇಳಿದೆ.

'ನಿನ್ನ ಪ್ರಶ್ನೆಗೆ ಉತ್ತರ ಕೊಡಕ್ಕೆ ಮುಂಚೆ ಒಂದು ಮಾತು ಕೇಳು. ಹಿಂದೆ ನಮ್ಮ ಮನೆಯಲ್ಲಿ ಅಷ್ಟು ಅನುಕೂಲ ಇರಲಿಲ್ಲವಲ್ಲ, ಆಗ ಯಾವತ್ತಾದರೂ ಸಿಹಿ ತಿಂಡಿ ಮಾಡಿದ್ದಾಗ, ನಮ್ಮಮ್ಮನ ಇನ್ನೊಂದು ಚೂರು ಕೇಳಿದರೆ ಮೂರು ತಿಂಗಳಿಗೆ ಯುಗಾದಿ ಇಲ್ಲ ದೀಪಾವಳಿ ಬರುತ್ತೆ. ಆಗ ತುಂಬಾ ಮಾಡುತೀನಿ, ಬೇಕಾದಷ್ಟು ತಿನ್ನುವಂತೆ ಎನ್ನುತ್ತಿದ್ದರು. ಹಾಗೆ ಈಗ 21ನೇ ಶತಮಾನದ ವಿಚಾರದ ಮಾತು. ಇವತ್ತಿನ ಸಮಸ್ಯೆ, ಇವತ್ತಿನ ಅಗತ್ಯ ಮರೆತು ಬಿಡಿ ದೂರದಲ್ಲಿರುವ ಹಸಿರು ಹುಲ್ಲುಗಾವಲು ನೋಡಿ ಸಂತೋಷ ಪಡಿ ಅನ್ನುತ್ತಾರೆ

ಮೂರ್ತಿಯ ಈ ವಾದ ನನಗೆ ಇಷ್ಟವಾಗಲಿಲ್ಲ. ಬೇರೆಯವರ ಉದ್ದೇಶದ ಬಗೆಗೆ ಅನುಮಾನಪಡಲಾರಂಭಿಸಿದರೆ ಅದಕ್ಕೆ ಅಂತ್ಯವೆಲ್ಲಿ ? ಇದನ್ನು ಮೂರ್ತಿಗೆ ತಿಳಿಸಿದೆ.

'ನೀನು ಕಂಪ್ಯೂಟರ್ ವಿಚಾರ ಹೇಳಿದೆಯಲ್ಲ, ಕಂಪ್ಯೂಟರ್ ಭಾಷೆಯಲ್ಲಿ GIGO ಎಂದರೆ ಏನು ಗೊತ್ತೆ ?' ಮೂರ್ತಿ ಕೇಳಿದ.

ಯಾವ ಗೀಗೊ ಬಗ್ಗೆಯೂ ನಾನು ಕೇಳಿರಲಿಲ್ಲ.

Garbage in Garbage out ಅಂತ. ಕಚಡಾ ಒಳಗೆ ಹಾಕಿದರೆ ಕಚಡಾ ಹೊರಕ್ಕೆ ಬರುತ್ತೆ ಅಂತ. ಕಂಪ್ಯೂಟರ್ ಇಟ್ಟುಕೊಂಡರೆ ಸಮಸ್ಯೆ ಪರಿಹಾರ ಆಗಲ್ಲ. ಅದಕ್ಕೆ ಎಂತಹ ಅಂಕಿ ಅಂಶ ಕೊಡುಂತ್ತೀರಿ. ಅದೆಷ್ಟು ಕರಾರುವಾಕ್ಕಾಗಿದೆ. ಅದು ಕೊಟ್ಟ ಉತ್ತರ ಹೇಗೆ ಬಳಸಿಕೊಳ್ಳುತೀರಿ ಅದೆಲ್ಲಾ ನೋಡಬೇಕು' ಮೂರ್ತಿಯ ಟೀಕೆ ಸಿದ್ಧವಾಗಿತ್ತು.

'ಅಲ್ಲಯ್ಯ ಕಂಪ್ಯೂಟರ್ ಒಂದು ರೀತಿ ಸಿಂಬಲ್ ಅಷ್ಟೆ. ಬರಲಿರುವ 21ನೇ ಶತಮಾನಕ್ಕೆ ಸಮಸ್ಯೆಗಳಿಗೆ ತಕ್ಷಣದ ಪರಿಹಾರ. ಹೊಸ ಅವತಾರಗಳು fair and just society ಆ ಶತಮಾನದ ಮುಖ್ಯ ಲಕ್ಷಣ ಕಣಯ್ಯ ಎಂದು ಹೇಳಲು ಪ್ರಯತ್ನಿಸಿದೆ.

ಮೂರ್ತಿ ತನ್ನ killjoy ಪ್ರವೃತ್ತಿ ಬಿಟ್ಟುಕೊಡಲಾರ. ಹೇಳಿದ 'ನೋಡು ಒಂದು ಶತಮಾನಕ್ಕೆ ಒಂದು ಮನೋಭಾವ ಎಂತಿಯಲ್ಲ ಅದೆಷ್ಟು ನಿಜ ನೀನೇ ಹೇಳು; ಬಸ್ಸಿಗೆ ಕಲ್ಲು ಹೊಡೆಯೋದು ನಿನ್ನ ಪ್ರಕಾರ ಹಳೆ ಶಿಲಾಯುಗದ ಲಕ್ಷಣ ಆಗ ಬೇಕು. ವರದಕ್ಷಿಣೆ ತರದೇ ಹೋದ ಸೊಸೆ ಸುಡೋದು ಎಷ್ಟನೆಯ ಶತಮಾನ ತೋರಿಸುತ್ತೆ ? ತಾರೀಖು ಬರೆಯುವಾಗ 2001 ಎಂದು ಬರೆಯಬಹುದು. ಆದರೆ ಇರೋ ಮನೋಭಾವ ಕ್ರಿ.ಪೂ. 800 ಆಗಬಹುದು ಕ್ರಿ.ಶ. 700 ಆಗಬಹುದು.

ಮೂರ್ತಿ ಬಂದಾಗ ಇದ್ದ ಉತ್ಸಾಹ ಆಗಲೇ ಇಳಿಯುತ್ತಿತ್ತು. ನಲ್ಲಿಯಲ್ಲಿ ಬರುತ್ತಿದ್ದ ನೀರು ಆಗಲೆ ನಿಂತು ಹೋಗಿತ್ತು. ಕೆಳಗಡೆ ಇನ್ನೂ ನೀರು ಬರುತ್ತಾ ಇದೆ, ಬೇಗ ಒಂದು ನಾಲ್ಕು ಬಕೆಟ್ ತಂದು ಹಾಕಿ ಎಂದು ಹೆಂಡತಿ ಬಕೆಟ್ ಕೈಲಿ ಕೊಟ್ಟಳು. 21ನೇ ಶತಮಾನ ಇನ್ನೂ ಬಹಳ ದೂರ ಎನಿಸಿತ್ತು.

—

ಪರಿಶಿಷ್ಟ - ೧

# ಕಂಪ್ಯೂಟರ್ ವೈರಸ್ ಟೆಕ್ನಾಲಜಿ

ಅ. ರಾ. ಸೇ.

---

ಇತ್ತೀಚಿನ ವೈಜ್ಞಾನಿಕ ಆವಿಷ್ಕಾರ ಕ.ವೈ.ಟೆ.

ಮುಂದಿನ ಶತಮಾನದ ಆದಿಭಾಗದಲ್ಲಿ ಇದು ಉಚ್ಛ್ರಾಯ ಸ್ಥಿತಿಯಲ್ಲಿರುತ್ತದೆ ಇದು ಒಂದು ವಿಧವಾದ ಕಾಮಧೇನು.

೧. ಆಳುವ ಪಕ್ಷದವರಿಗೆ

ಕಂಪ್ಯೂಟರ್ ವೈರಸ್[1] ಅನ್ನು ಸರಿಯಾಗಿ ಬಿತ್ತಿ ತಮ್ಮ ಸರ್ಕಾರದ ಸಾಧನೆಗಳನ್ನು ಸಾವಿರಪಟ್ಟು ಹೆಚ್ಚು ಮಾಡಿ ಪ್ರಚಾರ ಮಾಡಬಹುದು.

೨. ವಿರೋಧ ಪಕ್ಷದವರಿಗೆ

ಆಳುವ ಪಕ್ಷದ ಚುನಾವಣಾಹುರಿಯಾಳುಗಳಾಗಿ ತಮ್ಮನ್ನೇ ಆರಿಸುವಂತೆ ಕವೈಟೆಯುದೆಸೆಯಿಂದ ಮಾಡಬಹುದು.

೩. ಪ್ರೇಮಿಗಳಿಗೆ

ತಮ್ಮ ಕನಸಿನ ರಾಜ ಯಾರು ಎಂಬ ಪ್ರಶ್ನೆಗೆ ಉತ್ತರಕ್ಕಾಗಿ ಇನ್ನು ಮುಂದೆ ತರುಣಿಯರು ಕಂಪ್ಯೂಟರನ್ನೇ ಮೊರೆ ಹೋಗುತ್ತಾರೆ. ಕವೈಟೆ ದೆಸೆಯಿಂದ ತಾವೇ ಉತ್ತರ ಎಂದು ನಂಬಿಸಿ, ತರುವಾಯ...............

೪. ವಿದ್ಯಾರ್ಥಿಗಳಿಗೆ

ಪೆನ್ನು, ಹಾಳೆ, ಪುಸ್ತಕ, ಮೇಷ್ಟರು, ಲಂಚ ಕಾಪಿ ಯಾವುದೂ ಬೇಡ. ಪರೀಕ್ಷಾಮಂಡಲಿಯ ಕಂಪ್ಯೂಟರಿಗೆ ವೈರಸ್ಸನ್ನು ಬಿತ್ತಿ ಸುಲಭವಾಗಿ ಫಸ್ಟ್‌ರ್‍ಯಾಂಕ್ ಬರಬಹುದು.

೫. ರಾಷ್ಟ್ರೀಕೃತ ಬ್ಯಾಂಕುಗಳ ಸಾಲಗಾರರಿಗೆ

ತಮ್ಮ ಸಾಲ ಸೊನ್ನೆ ಎಂದು ಕಂಪ್ಯೂಟರಿನಲ್ಲಿ ಉತ್ತರ ಬರುವಂತೆ ವೈರಸ್ ಬಿತ್ತುವುದು.

೬. ರೈತರಿಗೆ ಪ್ರಜೆಗಳಿಗೆ

ನಿಮ್ಮ ಹೊಟ್ಟೆ ತುಂಬಿದೆ ಎಂದು ಕಂಪ್ಯೂಟರಿಗೆ ಕೊಟ್ಟ ಮಾಹಿತಿಯನ್ನು, ಸರಿಯಾದ ವೈರಸ್ ಬಿತ್ತಿ, ನಿಮ್ಮ ಹೊಟ್ಟೆ ಖಾಲಿ ಎಂದು ತೋರಿಸಬಹುದು.

---

[1] ಕಂಪ್ಯೂಟರಿನಲ್ಲಿ ಸಂಬಂಧಿಸಿದ ಭಾಗವನ್ನು ತಮಗೆ ಬೇಕಾದಂತೆ ಬದಲಿಸುವ ಅಥವಾ ಇಡೀ ಮಾಹಿತಿ ವ್ಯವಸ್ಥೆಯನ್ನೇ ಬದಲಿಸುವಂತೆ ಮಾಡುವ ಸುಲಭ ವಿಧಾನ.

ಶುಭಾಶಯಗಳೊಂದಿಗೆ

## ಶ್ರೀಂಗಾರ್ ಇಲೆಕ್ಟ್ರಿಕಲ್ಸ್

ಇಲೆಕ್ಟ್ರಿಕಲ್ ಇಂಜಿನೀಯರ್ ಹಾಗೂ ಪ್ರಥಮ ದರ್ಜೆಯ ಕಂಟ್ರಾಕ್ಟರ್
ತುಮಕೂರು ರಸ್ತೆ, ಪೀಣ್ಯ
ಬೆಂಗಳೂರು–560 058

ದೂರವಾಣಿ : 384549
350984

ಶುಭಾಶಯಗಳೊಂದಿಗೆ :—

## ಸ್ಕೈಲಾರ್ಕ್ ಆ್ಯನ್ಸಲರೀಸ್ ಕಾರ್ಪೊರೇಷನ್

ಎ–118, ಪೀಣ್ಯ ಇಂಡಸ್ಟ್ರಿಯಲ್ ಎಸ್ಟೇಟ್

ಬೆಂಗಳೂರು-560 058.